This amended regulations shall come into force with effect from 9.10.2003.

PD-26 **Administrative Officer,**
University of Agricultural Sciences, Bangalore.

**OFFICE OF THE SUPERINTENDING ENGINEER, ELECL. TRANSMISSION (W&M)**
**KARNATAKA POWER TRANSMISSION CORPORATION LTD., SHIMOGA**
**No. SEE/TR.(W&M)/EE(O)/AEE2/AEE/SSD/8183 dated 26th February 2004**

The Karnataka Power Transmission Corporation Ltd., have formulate a Scheme under 28(A) of the Electricity supply Act, 1948 and the same is herewith published in pursuance of section 29(ii) of the said act for information of the licence and any other persons interested. Particulars of the scheme are as follows:-

| | | |
|---|---|---|
| 1 | Name of the work | Construction of 220 KV Multi circuit line from Sharavathi Generating station to Dugadimane limit in the existing corridor. |
| 2 | Salient feature | 1. To evacuate additonal power due to increased generation in view of P&M works at S.V.P.<br>2. To improve the quality and relaiabality of power supply.<br>3. To reduce the over load condition of Sharavathi - Shimoga line. |
| 3 | Area passing through | Basavanabile, Tummargadda, Holgad Village, Kilar V/A, Kilara Halagere Village, Dugadimane limit. |
| 4 | Approximate cost | Rs. 1478.00 lakhs |

The corporation shall have and shall exercise all power which the Telegraphs authorities possess under Part (iii) of the Indian Telegraph Act 1985 (18 of 1985) for carryingout the above Scheme, objections to the above scheme if any should be sent to the Superintending Engineer, El. Transmission (W&M) circle, KPTCL, Park Extension, Harnahalli Manjappa Complex, Shimoga within Two months from the date of publication of the Notification for consideration of the Corporation.

PD-27 **Superintending Engineer, Elecl.,**
Transmission (W&M) KPTCL, Shimoga.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ-ವಿಭಾಗ-2,**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು-29**
**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-120:2000, ದಿನಾಂಕ: 29ನೇ ಮಾರ್ಚ್ 2004**

**ಅರ್ಜಿದಾರರು:**
ಶ್ರೀಮತಿ ಪುಷ್ಪರಾಣಿ,
ಶ್ರೀಮತಿ ಲೂರ್ದುಮೇರಿ,
ಶ್ರೀ ಜೋಸೆಫ್ ವಿಜಯಕುಮಾರ್
ನಂ. 12, ಎಫ್ ಸ್ಟ್ರೀಟ್, 1ನೇ ಮೇನ್,
ನ್ಯೂ ಗುಡದಳ್ಳಿ, ಮೈಸೂರು ರಸ್ತೆ, ನಿಯರ್
ಐಯ್ಯಂಗಾರ್ ಬೇಕರಿ, ಬೆಂಗಳೂರು-26

**ವಿರುದ್ಧ**

**ಪ್ರತಿವಾದಿಗಳು:**
1) ಮಾಲೀಕರು, ರಾಜು ಚಾಯನ್, ಸನ್‌ಶೈನ್ ಮೂವರ್ಸ್, ಟ್ರಾನ್ಸ್‌ಪೋರ್ಟ್, ಕಾಂಟ್ರಾಕ್ಟ್ಸ್ ಅಂಡ್ ಫ್ಲೀಟ್ ಹೋನರ್ಸ್, ಅಡ್ಮಿನಿಸ್ಟ್ರೇಶನ್ ಆಫೀಸ್, ರಾಮು ಬಿಲ್ಡಿಂಗ್, ಎಂಇಎಸ್ ರಸ್ತೆ, ಮುತ್ಯಾಲನಗರ, ಬೆಂಗಳೂರು-54.
2) ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ. ವೈಟ್‌ಫೀಲ್ಡ್ ರಸ್ತೆ, ಮಹದೇವಪುರ ಅಂಚೆ, ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ 1) ಪುಷ್ಪರಾಣಿ 2) ಲೂರ್ದುಮೇರಿ 3) ಜೋಸೆಫ್ ವಿಜಯಕುಮಾರ್ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಆರೋಗ್ಯನಾಥನ್ ಅ: ಕುಮಾರ್ ಇವರು ಪ್ರತಿವಾದಿ-1 ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 560 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬೆಂಗಳೂರು ಉಪ ವಿಭಾಗ-2, ಬೆಂಗಳೂರು.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ-ವಿಭಾಗ-2,**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು-29**
**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-68:2003, ದಿನಾಂಕ: 1ನೇ ಏಪ್ರಿಲ್ 2004**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

ಅರ್ಜಿದಾರರು:
1. ಶ್ರೀಮತಿ ಶರಾಬಿ ಕೋಂ ಲೇಟ್ ಮಸ್ತಾನಸಾಬ್ ಮತ್ತು ಇತರೆ 4 ಜನ ದಿನ್ನೇನಹಳ್ಳಿ ಗ್ರಾಮ, ಮಂಚೇನಹಳ್ಳಿ ಹೋಬಳಿ, ಗೌರಿಬಿದನೂರು ತಾ:

ಪ್ರತಿವಾದಿಗಳು:
1. ಶ್ರೀ ಕೆ.ಎನ್. ಪ್ರಭಾಕರ್ ಬಿನ್ ಡಿ. ನಂಜುಂಡಪ್ಪ, ಸಂ: 5, ಸಿ.ಎನ್. ರಾಮಯ್ಯ ಲೇಔಟ್, ಎಲ್‌ಆರ್ ಬಂಡೆ, ಆರ್‌ಟಿ ನಗರ, ಬೆಂಗಳೂರು.
2. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ. ಮಯೂರ ಕಾಂಪ್ಲೆಕ್ಸ್, ಪೀಣ್ಯ, ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಶರಾಬಿ ಮತ್ತು ಇತರೆ 4 ಜನ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಲೇಟ್ ಮಸ್ತಾನ್‌ಸಾಬ್ ಇವರು ಪ್ರತಿವಾದಿ-1 ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 561 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬೆಂಗಳೂರು ಉಪ ವಿಭಾಗ-2, ಬೆಂಗಳೂರು.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ-ವಿಭಾಗ-2,**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು-29**
**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-52:2003, ದಿನಾಂಕ: 1ನೇ ಏಪ್ರಿಲ್ 2004**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

ಅರ್ಜಿದಾರರು:
1) ಶ್ರೀಮತಿ ರಾಧಾ ಕೋಂ ಲೇಟ್ ಸುರೇಶ್
2) ಮಾ: ಶರತ್, ಮಾರಗೊಂಡನಹಳ್ಳಿ, ಕೆಂಗೇರಿ ಹೋಬಳಿ, ಬೆಂಗಳೂರು

ಪ್ರತಿವಾದಿಗಳು:
1. ಶಿವಣ್ಣ ಬಿನ್ ಹೊನ್ನಪ್ಪ
2. ಶ್ರೀಮತಿ ಗೌರಮ್ಮ ಕೋಂ ಶಿವಣ್ಣ ನಂ. 79:3, 5ನೇ ಎ ಕ್ರಾಸ್, ಸೊಲ್ಲಾಪುರದಮ್ಮನ ಬಡಾವಣೆ, ಸುಂಕದಕಟ್ಟೆ, ಮಾಗಡಿ ರಸ್ತೆ, ಬೆಂಗಳೂರು-79
3. ಸದಾನಂದ ಅ: ಸದಾ ಗುತ್ತಿಗೆದಾರರು, ಸುಂಕದಕಟ್ಟೆ, ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ 1) ಶ್ರೀಮತಿ ರಾಧಾ 2) ಮಾ: ಶರತ್ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಸುರೇಶ್ ಇವರು ಪ್ರತಿವಾದಿ-1 ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 562 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬೆಂಗಳೂರು ಉಪ ವಿಭಾಗ-2, ಬೆಂಗಳೂರು.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ

**ಸಂಖ್ಯೆ: ಕಾಪಕಾ:ಎಫ್:ಎಸ್ಆರ್-15:2003**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1) ಶ್ರೀ ಅಜಯ್ ಬಿನ್ ಮುತ್ತುಸ್ವಾಮಿ, ವಯಸ್ಸು 4 ವರ್ಷ
2) ಲಕ್ಷ್ಮಿ ಕೋಂ ಮುತ್ತುಸ್ವಾಮಿ, ವಾಸ: ತಮಿಳು ಕಾಲೋನಿ, ಚಿಕ್ಕಮಗಳೂರು

1) ಮ್ಯಾನೇಜರ್, ಅಬ್ಬನ ಎಸ್ಟೇಟ್ (ಟಾಟಾ ಕಾಫಿ ಲಿ.,) ಬಾಳ್ಳುಪೇಟೆ ಅಂಚೆ, ಹಾಸನ ಜಿಲ್ಲೆ.
2) ಮೆ: ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ.ಲಿ., ಬ್ರಾಂಚ್ ಆಫೀಸ್, ಬಾದ್‌ಶಾ ಬಿಲ್ಡಿಂಗ್, ಕ್ಲಾಕ್‌ಟವರ್ ಎದುರು, ವಿರಾಜಪೇಟೆ, ಕೊಡಗು.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಮುತ್ತುಸ್ವಾಮಿ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 3.2.2002 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

ಪಿ.ಆರ್. 563

**ಹೆಚ್. ಗೋಪಾಲಗೌಡ,** ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ

**ಸಂಖ್ಯೆ: ಕಾಪಕಾ:ಎಫ್:ಎಸ್ಆರ್-14:2003**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

ಉನ್ನಮಲೆ ಕೋಂ ಲೇಟ್ ಅನ್ನಾಮಲೆ, ಸುಮಾರು 25 ವರ್ಷಗಳು, ಕೇರಾಫ್ ಸಿ.ಪಿ.ಐ. ಆಫೀಸ್, ತಮಿಳು ಕಾಲೋನಿ, ಚಿಕ್ಕಮಗಳೂರು

1) ಮೆ: ಕರಡಿಬೆಟ್ಟ ಎಸ್ಟೇಟ್ (ಟಾಟಾ ಕಾಫಿ ಲಿಮಿಟೆಡ್) ರಾಯರಕೊಪ್ಪಲು ಅಂಚೆ, ಹಾಸನ ಜಿಲ್ಲೆ-573339.
2) ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ. ಲಿ., ವಿರಾಜಪೇಟೆ ಶಾಖೆ, ಕೊಡಗು ಜಿಲ್ಲೆ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಅನ್ನಾಮಲೆ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 13.3.2002 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ,** ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

ಪಿ.ಆರ್. 564

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ

**ಉಪಸ್ಥಿತರು:** ಜಿ.ಎಸ್. ಕರಿಯಪ್ಪ, ಭಾ.ಅ.ಸೇ. ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

**ಪೊಲೀಸ್ ಕ್ರೈಂ ಸಂಖ್ಯೆ: 76/1997, ದಿನಾಂಕ: 31ನೇ ಆಗಸ್ಟ್ 1997**

**ವಾಹನ:** ಅಂಬಾಸಿಡರ್ ಕಾರ್ ಸಂಖ್ಯೆ: ಕೆಎ-09-ಎಂ-2449

**ಪಿರ್ಯಾದುದಾರರು** ವಿರುದ್ಧ **ಅಪರಾಧಿಗಳು**

ಶ್ರೀ ಎ.ಡಿ. ತಿಪ್ಪಯ್ಯ
ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಅಬ್ಬಿನಹೊಳೆ,
ಪೊಲೀಸ್ ಠಾಣೆ, ಹಿರಿಯೂರು ತಾ:

1. ಶ್ರೀ ಶಾಂತರಾಜ ಅಲಿಯಾಸ್ ಗೌಡ ಬಿನ್ ಹನುಮಂತರಾಯಪ್ಪ, ಚಿರಪನಹಳ್ಳಿ, ಶಿರಾ ತಾ: ತುಮಕೂರು ಜಿಲ್ಲೆ.
2. ಶ್ರೀ ತಿರುಮಲೇಶ ಅಲಿಯಾಸ್ ರವಿ ಅಲಿಯಾಸ್ ರವಿಕುಮಾರ್ ಬಿನ್ ರಾಮಣ್ಣ, ಸಂತೇಪೇಟೆ, ಶಿರಾ ಟೌನ್.

**ವಾಹನದ ಮಾಲೀಕರು** : ಶ್ರೀ ಆರ್.ಟಿ. ತಿರುಮಲೇಶ ಬಿನ್ ಕೆ. ತಿಪ್ಪೇಸ್ವಾಮಿ, ತಿರುಮಲೇಶ ನಿಲಯ, ಕಾಳಿದಾಸ ನಗರ, ಶಿರಾ, ತುಮಕೂರು ಜಿಲ್ಲೆ.

**ಅರ್ಜಿದಾರರ ಪರವಕೀಲರು** : ಶ್ರೀ ಹೆಚ್.ಎಸ್. ಮಂಜುನಾಥ, ವಕೀಲರು, ಚಿತ್ರದುರ್ಗ.

**ಪ್ರಕರಣದ ಹಿನ್ನೆಲೆ**

ದಿನಾಂಕ: 31.8.1997 ರಂದು ಬೆಳಿಗ್ಗೆ 8.00 ಗಂಟೆಯ ಸಮಯದಲ್ಲಿ ಅಬ್ಬಿನಹೊಳೆ ಪೊಲೀಸ್ ಠಾಣೆಗೆ ಬಂದ ಖಚಿತವಾದ ವರ್ತಮಾನದ ಮೇರೆಗೆ ಪೊಲೀಸ್ ಠಾಣೆಯ ಸಬ್ ಇನ್ಸ್‌ಪೆಕ್ಟರ್ ಶ್ರೀ ಎ.ಡಿ. ತಿಪ್ಪಯ್ಯ ಇವರು ಸಿಬ್ಬಂದಿಗಳಾದ ASI ಜಯನಾಯ್ಕ, HC-322, PC-641, PC-1489, PC-1497 ಮತ್ತು PC-1491 ಇವರೊಂದಿಗೆ ಅಬ್ಬಿನಹೊಳೆ ಗ್ರಾಮದ ಬಸ್ ನಿಲ್ದಾಣದ ಬಳಿ ಕಾಯುತ್ತಿರುವ ಸಮಯದಲ್ಲಿ ಹಿರಿಯೂರು ಕಡೆಯಿಂದ ಧರ್ಮಪುರದ ಕಡೆಗೆ ಹೋಗುತ್ತಿದ್ದ ಒಂದು ಕಾರನ್ನು ಕಂಡು ನಿಲ್ಲಿಸಲು ಸೂಚನೆ ನೀಡಿದರೂ ಸಹ ಕಾರನ್ನು ನಿಲ್ಲಿಸದೇ ಇದ್ದುದರಿಂದ ವಾಹನವನ್ನು ಹಿಂಬಾಲಿಸಿ ಅಬ್ಬಿನಹೊಳೆ ಗ್ರಾಮದ ಬಳಿ ಇರುವ ಕೆರೆ ಅಂಗಳದ ಬಳಿಯ ಸೇತುವೆ ಹತ್ತಿರ ವಾಹನವನ್ನು ತಡೆದು ನಿಲ್ಲಿಸಿ, ಪರಿಶೀಲಿಸಿ ನೋಡಲಾಗಿ, ವಾಹನವು ಬಿಳಿ ಬಣ್ಣದ ಅಂಬಾಸಿಡರ್ ಕಾರ್ ಆಗಿದ್ದು, ವಾಹನದ ಸಂಖ್ಯೆ: ಕೆಎ-09-ಎಂ-2449 ಎಂದು ತಿಳಿದು ಬಂದಿದೆ. ಕಾರಿನಲ್ಲಿದ್ದವರನ್ನು ವಿಚಾರ ಮಾಡಲಾಗಿ, ಕಾರಿನಲ್ಲಿದ್ದವರು ವಾಹನದಲ್ಲಿ ಶ್ರೀಗಂಧವನ್ನು ಸಾಗಿಸುತ್ತಿರುವುದಾಗಿಯೂ ಹಾಗೂ ಸದರಿ ಶ್ರೀಗಂಧದ ಸಾಗಾಣಿಕೆಗಾಗಿ ಯಾವುದೇ ಅಧಿಕೃತ ಪರವಾನಗಿ ಇಲ್ಲವೆಂದು ತಿಳಿಸಿದ ಕಾರಣ ಸದರಿ ವಾಹನದ ತಪಾಸಣೆಯನ್ನು ಪಂಚರ ಸಮಕ್ಷಮ ಮಾಡಲಾಗಿ, ವಾಹನದ ಡ್ರೈವರ್ ಸೀಟಿನ ಹಿಂಭಾಗದ ಕೆಳಭಾಗದಲ್ಲಿ ಇರಿಸಲಾಗಿದ್ದ ಬಾಯಿ ಕಟ್ಟಲಾಗಿದ್ದ ಒಂದು ಸಣ್ಣ ಗೋಣಿ ಚೀಲವು ಕಾಣಿಸಿದ್ದು, ಸದರಿ ಗೋಣಿಚೀಲವನ್ನು ಹೊರತೆಗೆದು ಪಂಚರ ಸಮಕ್ಷಮ ಪರಿಶೀಲಿಸಲಾಗಿ ಗೋಣಿ ಚೀಲದಲ್ಲಿದ್ದ ಶ್ರೀಗಂಧವನ್ನು 13 ಭಾಗಗಳನ್ನಾಗಿ ವಿಂಗಡಣೆ ಮಾಡಿ ತೂಕ ಮಾಡಲಾಗಿ ಸುಮಾರು $17^1/_2$ ಕೆಜಿ ತೂಕದ ಶ್ರೀಗಂಧದ ತುಂಡುಗಳು ಇದ್ದು, ಅವುಗಳ ವಿವರ ಈ ಕೆಳಗಿನಂತಿರುತ್ತದೆ.

| | | |
|---|---|---|
| 1 | ಇದು ಮರದ ಬಡ್ಡೆಯಾಗಿದ್ದು, ಸುಮಾರು $1^1/_4$ ಅಡಿ ಉದ್ದ ಇದ್ದು, 3 ಕೆ.ಜಿ. ತೂಕ ಇರುತ್ತದೆ. | |
| 2 | ಉದ್ದನೆಯ ತುಂಡು 1 ಅಡಿ ಉದ್ದ ಇದ್ದು, 2 ಕೆ.ಜಿ. ತೂಕವಿರುತ್ತದೆ. | |
| 3 | ಉದ್ದನೆಯ ತುಂಡು $1^1/_4$ ಅಡಿ ಉದ್ದವಿದ್ದು, 2 ಕೆ.ಜಿ ತೂಕವಿರುತ್ತದೆ. | |
| 4 | ಉದ್ದನೆಯ ತುಂಡು 10 ಇಂಚು ಉದ್ದವಿದ್ದು, 1 ಕೆ.ಜಿ. ತೂಕವಿರುತ್ತದೆ. | |
| 5 | ಉದ್ದನೆಯ ತುಂಡು 1 ಅಡಿ ಉದ್ದವಿದ್ದು, 1 ಕೆ.ಜಿ. ತೂಕವಿರುತ್ತದೆ. | |
| 6 | ಉದ್ದನೆಯ ತುಂಡು $^3/_4$ ಅಡಿ ಉದ್ದ ಇದ್ದು, $^1/_2$ ಕೆ.ಜಿ ತೂಕ ಇರುತ್ತದೆ. | |
| 7 | ಎ) ಉದ್ದನೆಯ ತುಂಡು $^3/_4$ ಅಡಿ ಉದ್ದ<br>ಬಿ) ಉದ್ದನೆಯ ತುಂಡು $1^1/_2$ ಅಡಿ ಉದ್ದ | 2 ತುಂಡುಗಳು ಒಟ್ಟು ತೂಕ $1^1/_2$ ಕೆ.ಜಿ. |
| 8 | ಎ) ಉದ್ದನೆಯ ತುಂಡು 1 ಅಡಿ ಉದ್ದ<br>ಬಿ) ಉದ್ದನೆಯ ತುಂಡು 1 ಅಡಿ ಉದ್ದ<br>ಸಿ) ಉದ್ದನೆಯ ತುಂಡು 1 ಅಡಿ ಉದ್ದ | 3 ತುಂಡುಗಳು ಒಟ್ಟು ತೂಕ $1^1/_4$ ಕೆ.ಜಿ. |
| 9 | ಎ) ಉದ್ದನೆಯ ತುಂಡು $1^1/_2$ ಅಡಿ ಉದ್ದ<br>ಬಿ) ಉದ್ದನೆಯ ತುಂಡು 15 ಸೆ.ಮೀ. ಉದ್ದ<br>ಸಿ) ಉದ್ದನೆಯ ತುಂಡು 16 ಸೆ.ಮೀ. ಉದ್ದ<br>ಡಿ) ಉದ್ದನೆಯ ತುಂಡು 16 ಸೆಂ.ಮೀ. ಉದ್ದ | 4 ತುಂಡುಗಳು ಒಟ್ಟು ತೂಕ 1 ಕೆ.ಜಿ. |
| 10 | ಎ) ಉದ್ದನೆಯ ತುಂಡು 13 ಸೆ.ಮೀ. ಉದ್ದ<br>ಬಿ) ಉದ್ದನೆಯ ತುಂಡು 20 ಸೆ.ಮೀ. ಉದ್ದ<br>ಸಿ) ಉದ್ದನೆಯ ತುಂಡು 13 ಸೆ.ಮೀ. ಉದ್ದ<br>ಡಿ) ಉದ್ದನೆಯ ತುಂಡು 19 ಸೆ.ಮೀ. ಉದ್ದ | 4 ತುಂಡುಗಳು ಒಟ್ಟು ತೂಕ $1^1/_2$ ಕೆ.ಜಿ. |
| 11 | ಎ) ಉದ್ದನೆಯ ತುಂಡು 1 ಅಡಿ ಉದ್ದ<br>ಬಿ) ಉದ್ದನೆಯ ತುಂಡು 1 ಅಡಿ ಉದ್ದ | 2 ತುಂಡುಗಳು ಒಟ್ಟು ತೂಕ 1 ಕೆ.ಜಿ. |
| 12 | ಎ) ಉದ್ದನೆಯ ತುಂಡು 10 ಇಂಚು ಉದ್ದ<br>ಬಿ) ಉದ್ದನೆಯ ತುಂಡು 14 ಸೆ.ಮೀ. ಉದ್ದ<br>ಸಿ) ಉದ್ದನೆಯ ತುಂಡು 14 ಸೆ.ಮೀ. ಉದ್ದ<br>ಡಿ) ಉದ್ದನೆಯ ತುಂಡು 14 ಸೆ.ಮೀ. ಉದ್ದ<br>ಇ) ಉದ್ದನೆಯ ತುಂಡು 1 ಅಡಿ ಉದ್ದ<br>ಎಫ್) ಉದ್ದನೆಯ ತುಂಡು 9 ಸೆ.ಮೀ. ಉದ್ದ | 6 ತುಂಡುಗಳು ಒಟ್ಟು ತೂಕ $1^1/_2$ ಕೆ.ಜಿ. |
| 13 | $1^1/_4$ ಕೆ.ಜಿ. ತುಂಡುಗಳ ಕಟ್ಟು | |

ಸದರಿ ಕಾರಿನಲ್ಲಿದ್ದ ವ್ಯಕ್ತಿಗಳು ಶ್ರೀಗಂಧದ ಸಾಗಾಣಿಕೆಗೆ ಅಧಿಕೃತ ಪರವಾನಗಿಯನ್ನು ಹೊಂದಿಲ್ಲದ ಕಾರಣ ಕರ್ನಾಟಕ ಅರಣ್ಯ ಕಾಯ್ದೆ - 1963 ರ ನಿಯಮ - 62 ರ ಪ್ರಕಾರ ಎಲ್ಲಾ ವಿಧಿವಿಧಾನಗಳನ್ನು ಅನುಸರಿಸಿ ಮೇಲ್ಕಂಡಂತೆ ಮಹಜರ್ ಮಾಡಿರುತ್ತಾರೆ.

ಸ್ಥಳದ ಪಂಚನಾಮದಲ್ಲಿ ನಮೂದಿಸಿದಂತೆ, ಶ್ರೀಗಂಧದ ಒಟ್ಟು ತೂಕ 17.500 ಕೆ.ಜಿ. ಆಗಿರುತ್ತದೆ. ಮೇಲ್ಕಂಡ ಮಹಜರ್ ಅನ್ನು ದಿನಾಂಕ: 31.8.97 ರಂದು ಬೆಳಿಗ್ಗೆ 8.30 ರಿಂದ 10.00 ಗಂಟೆಯ ಅವಧಿಯಲ್ಲಿ ಬರೆಯಲಾಗಿದೆ. ನಂತರ ಶ್ರೀಗಂಧ ಮತ್ತು ವಾಹನವನ್ನು (ಅಂಬಾಸಿಡರ್ ಕಾರ್) ಅಮಾನತ್ತುಪಡಿಸಿಕೊಂಡು, ಕರ್ನಾಟಕ ಅರಣ್ಯ ಕಾಯ್ದೆ - 1963 ರ ಕಲಂ 86, 87 R/W 379 ಐಪಿಸಿ ಪ್ರಕಾರ ಕೇಸು ದಾಖಲಿಸಿಕೊಂಡು ವಾಹನ ಮತ್ತು ಶ್ರೀಗಂಧವನ್ನು ಈ ಪ್ರಾಧಿಕಾರಕ್ಕೆ ಕರ್ನಾಟಕ ಅರಣ್ಯ ಕಾಯ್ದೆ - 1963 ರ ಪ್ರಕಾರ ಮುಂದಿನ ಕ್ರಮಗಳನ್ನು ಜರುಗಿಸಲು ಒಪ್ಪಿಸಿರುತ್ತಾರೆ. ಮೇಲ್ಕಂಡ 13 ಭಾಗಗಳ ಪೈಕಿ 8 ರಲ್ಲಿ ಇರುವ 3 ತುಂಡುಗಳ ಪೈಕಿ (ಎ) ನಲ್ಲಿ ಇರುವ ತುಂಡನ್ನು ಸ್ಯಾಂಪಲ್ ಪೀಸ್ ಎಂದು ಪೊಲೀಸ್ ಇಲಾಖೆಯು ಇಟ್ಟುಕೊಂಡಿದ್ದು, ಈ ಪ್ರಾಧಿಕಾರದ ವಶಕ್ಕೆ 17.00 ಕೆ.ಜಿ. ಶ್ರೀಗಂಧವನ್ನು ನೀಡಿರುತ್ತಾರೆ.

ಬಳಿಕ, ಈ ಪ್ರಾಧಿಕಾರವು 17.00 ಕೆಜಿ ಶ್ರೀಗಂಧ ಮತ್ತು ಅಂಬಾಸಿಡರ್ ಕಾರನ್ನು ವಲಯ ಅರಣ್ಯಾಧಿಕಾರಿಗಳು, ಚಿತ್ರದುರ್ಗ ಇವರ ರಕ್ಷಣೆಯಲ್ಲಿಟ್ಟುಕೊಳ್ಳಲು ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ಇವರಿಗೆ ಸೂಚಿಸಲಾಯಿತು.

ವಾಹನದ ಮಾಲೀಕರ ವಿವರಗಳನ್ನು ತಿಳಿದುಕೊಳ್ಳುವ ಸಲುವಾಗಿ ಈ ಪ್ರಾಧಿಕಾರವು ಪ್ರಾದೇಶಿಕ ಸಾರಿಗೆ ಅಧಿಕಾರಿ, ಮೈಸೂರು ಇವರೊಂದಿಗೆ ಪತ್ರ ವ್ಯವಹಾರ ಮಾಡಲಾಗಿ ಅಂಬಾಸಿಡರ್ ಕಾರ್ ಸಂಖ್ಯೆ: ಕೆಎ-09-ಎಂ-2449 ರ 'ಬಿ' ವಹಿಯ ಎಕ್ಸ್‌ಟ್ರಾಕ್ಟನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ 'ಬಿ' ವಹಿಯ ಎಕ್ಸ್‌ಟ್ರಾಕ್ಟ್‌ನ ಅನ್ವಯ ವಾಹನವು ಶ್ರೀ ಹುಸೇನ್ ಷರೀಫ್ ಬಿನ್ ಲೇಟ್ ಅಹ್ಮದ್ ಶರೀಫ್, ನಂ. 2621, ಪುಲಕೇಶಿ ರಸ್ತೆ, ಲಷ್ಕರ್ ಮೊಹಲ್ಲಾ, ಮೈಸೂರು ಇವರ ಹೆಸರಿನಲ್ಲಿ ನೋಂದಾಯಿತವಾಗಿರುವುದಾಗಿಯೂ ವಾಹನದ ಚಾಸ್ಸಿ ಸಂಖ್ಯೆ: 111-552426 ಮತ್ತು ಇಂಜಿನ್ ಸಂಖ್ಯೆ: ಡಿ. 270678 ಆಗಿರುತ್ತದೆ.

ಈ ಪ್ರಾಧಿಕಾರವು ಪ್ರಾದೇಶಿಕ ಸಾರಿಗೆ ಅಧಿಕಾರಿ, ಮೈಸೂರು ರವರು ನೀಡಿರುವ 'ಬಿ' ವಹಿಯ ಎಕ್ಸ್‌ಟ್ರಾಕ್ಟಿನ ಅನ್ವಯ ನೋಂದಾಯಿತ ಮಾಲೀಕರಾದ ಶ್ರೀ ಹುಸೇನ್ ಷರೀಫ್ ಬಿನ್ ಲೇಟ್ ಅಹಮ್ಮದ್ ಶರೀಫ್, ಮೈಸೂರು ಇವರಿಗೆ ಸದರಿಯವರ ವಾಹನವು ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದರಿಂದ ವಾಹನವನ್ನು ಸರ್ಕಾರದ ಪರವಾಗಿ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕೆ ಕಾರಣಗಳನ್ನು ನೀಡುವಂತೆ 15 ದಿನಗಳ ಕಾಲಾವಕಾಶ ನೀಡಿ ನೋಟೀಸ್ ಜಾರಿ ಮಾಡಲಾಯಿತು.

ಸದರಿ ವಾಹನದ ಸಿ.ಸಿ. ಯು ಬದಲಾವಣೆ ಆಗಿರುವುದಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿ, ಮೈಸೂರು ರವರ 'ಬಿ' ವಹಿಯ ಎಕ್ಸ್‌ಟ್ರಾಕ್ಟ್ ಮೂಲಕ ತಿಳಿದು ಬಂದಿದ್ದರಿಂದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ತುಮಕೂರು ರವರಿಂದ ವಾಹನದ 'ಬಿ' ವಹಿಯ ಎಕ್ಸ್‌ಟ್ರಾಕ್ಟ್ ಪಡೆದು, ಪರಿಶೀಲಿಸಲಾಗಿ ವಾಹನವು ಶ್ರೀ ಟಿ. ತಿರುಮಲೇಶ್ ಬಿನ್ ತಿಪ್ಪೇಸ್ವಾಮಿ, ತಿರುಮಲೇಶ ನಿಲಯ, ಕಾಳಿದಾಸ ನಗರ, ಶಿರಾ, ತುಮಕೂರು ಜಿಲ್ಲೆ ಇವರ ಹೆಸರಿನಲ್ಲಿ ನೋಂದಾಯಿತವಾಗಿರುತ್ತದೆ.

ಶ್ರೀ ಆರ್.ಟಿ. ತಿರುಮಲೇಶ್ ಬಿನ್ ಕೆ. ತಿಪ್ಪೇಸ್ವಾಮಿ, ಕಾಳಿದಾಸ ನಗರ, ಶಿರಾ ಇವರು ಶ್ರೀ ಹೆಚ್.ಎಸ್. ಮಂಜುನಾಥ, ವಕೀಲರು, ಚಿತ್ರದುರ್ಗ ಇವರ ಮುಖಾಂತರ ಸಿ.ಆರ್.ಪಿ.ಸಿ. ಕಲಂ - 457 ರನ್ವಯ ಅರ್ಜಿಯನ್ನು ಈ ಪ್ರಾಧಿಕಾರದ ಮುಂದೆ ದಾಖಲು ಮಾಡಿ ವಾಹನದ RC ಪುಸ್ತಕದ ಪ್ರತಿಯನ್ನು ಸಲ್ಲಿಸಿರುತ್ತಾರೆ ಹಾಗೂ ವಾಹನವನ್ನು ಮಧ್ಯಂತರ ವಶಕ್ಕೆ ನೀಡುವಂತೆ ಕೋರಿರುತ್ತಾರೆ.

ನಂತರ ಈ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ದಿನಾಂಕ: 4.7.2000, 18.7.2000, 27.7.2000, 10.8.2000, 30.8.2000, 13.9.2000, 5.10.2000, 19.10.2000, 22.11.2000, 13.12.2000, 24.1.2001, 23.2.2001, 16.5.2001, 29.5.2001, 18.7.2001, 24.8.2001, 13.9.2001 ರಂದು ಸಾಕ್ಷಿದಾರರನ್ನು ವಿಚಾರಣೆ ಮಾಡಲಾಯಿತು.

**ಅಭಿಯೋಜನೆ ಸಾಕ್ಷಿಗಳವರ ಪರವಾಗಿ ಸಾಕ್ಷಿಗಳು**

1. ಶ್ರೀ ಜಿ.ಆರ್. ವೆಂಕಟೇಶ ರೆಡ್ಡಿ ಬಿನ್ ಶ್ರೀ ರಾಮಚಂದ್ರ ರೆಡ್ಡಿ ಪೊಲೀಸ್ ಪೇದೆ ಸಂಖ್ಯೆ: 351, ಸಂಚಾರಿ ಪೊಲೀಸ್ ಠಾಣೆ, ದಾವಣಗೆರೆ - PW-1
2. ಶ್ರೀ ಎ.ಡಿ. ಗುರುಶಾಂತಪ್ಪ ಬಿನ್ ದೊಡ್ಡ ಹನುಮಪ್ಪ, ಮುಖ್ಯ ಪೇದೆ - ನಂ. 225, (ಹಿಂದಿನ ಬಕಲ್ ಸಂಖ್ಯೆ: 322) ಪರಶುರಾಂಪುರ ಪೊಲೀಸ್ ಠಾಣೆ, ಪರಶುರಾಂಪುರ - PW-2
3. ಶ್ರೀ ಬಿ. ಜುಂಜಪ್ಪ ಬಿನ್ ಭೀಮಣ್ಣ, ಸಂಗೇನಹಳ್ಳಿ, ಹಿರಿಯೂರು ತಾ: - PW-3
4. ಶ್ರೀ ಎ.ಡಿ. ತಿಪ್ಪಯ್ಯ ಬಿನ್ ಬಿ. ತಿಪ್ಪಯ್ಯ, ಪಿಎಸ್‌ಐ (ಅಪರಾಧ), ಚಳ್ಳಕೆರೆ - PW-4
5. ಶ್ರೀ ರಂಗಸ್ವಾಮಿ ಬಿನ್ ಶ್ರೀ ಜಿ. ರಂಗಪ್ಪ, ಇಕ್ಕನೂರು ಗ್ರಾಮ, ಹಿರಿಯೂರು ತಾ: - PW-5

**ಪ್ರತಿವಾದಿಗಳ ಪರ ಸಾಕ್ಷಿಗಳು :** ಯಾರು ಇಲ್ಲ

ಮೇಲ್ಕಂಡ ಸಾಕ್ಷಿದಾರರ ಹೇಳಿಕೆಗಳನ್ನು ದಾಖಲು ಮಾಡಿಕೊಳ್ಳಲಾಯಿತು. ಈ ಪ್ರಾಧಿಕಾರದ ಆದೇಶದನ್ವಯ ಸಹಾಯಕ ಅಭಿಯೋಜಕ ನಿರ್ದೇಶಕರು ಹಾಗೂ ಆಪಾದಿತರ ಪರ ವಕೀಲರು ಲಿಖಿತ ವಾದಗಳನ್ನು ಮಂಡಿಸಿರುತ್ತಾರೆ. ಆಪಾದಿತರ ಪರ ವಕೀಲರು ಮಂಡಿಸಿರುವ ಲಿಖಿತ ವಾದದೊಂದಿಗೆ ಪ್ರಕರಣಕ್ಕೆ ಸಂಬಂಧಿಸಿದಂತೆ ಅಬ್ಬಿನಹೊಳೆ ಪೊಲೀಸ್ ಠಾಣೆ, ಅಬ್ಬಿನಹೊಳೆ ಇವರು ಸಿವಿಲ್ ಜಡ್ಜ್ (ಜೂನಿಯರ್ ಡಿವಿಜನ್) ಮತ್ತು ಜೆ.ಎಂ.ಎಫ್.ಸಿ. ಹಿರಿಯೂರು ಇವರ ನ್ಯಾಯಾಲಯದಲ್ಲಿ ಇದೇ ಪ್ರಕರಣದಲ್ಲಿ ಭಾಗಿಯಾಗಿದ್ದರೆಂದು ಆರೋಪಿಸಿ ದಾಖಲು ಮಾಡಲಾಗಿದ್ದ ಸಿ.ಸಿ. ಸಂಖ್ಯೆ: 399/1998 ರ ಪ್ರಕರಣದಲ್ಲಿ ಆಪಾದಿತರಾದ

1. ಶಾಂತರಾಜ್ ಅಲಿಯಾಸ್ ಗೌಡ ಬಿನ್ ಹನುಮಂತರಾಯಪ್ಪ, ಚಿರಪ್ಪನಹಳ್ಳಿ, ಶಿರಾ ತಾಲ್ಲೂಕು
2. ತಿರುಮಲೇಶ್ ಅಲಿಯಾಸ್ ರವಿ ಅಲಿಯಾಸ್ ರವಿಕುಮಾರ್ ಬಿನ್ ರಾಮಣ್ಣ, ತಿರುಮಲೇಶ ನಿಲಯ, ಕಾಳಿದಾಸನಗರ, ಶಿರಾ.

ಇವರುಗಳನ್ನು ಪ್ರಾಸಿಕ್ಯೂಷನ್ ಬಲವಾದ ಸಾಕ್ಷಿ ನೀಡಿಲ್ಲವೆಂದು ಆರೋಪ ಮುಕ್ತಗೊಳಿಸಿದೆ. ಆದೇಶದ ಪ್ರತಿಗಳನ್ನು ಸಲ್ಲಿಸಿರುತ್ತಾರೆ.

ಅಭಿಯೋಜನೆ ಪರ ಸಾಕ್ಷಿಗಳ ಹೇಳಿಕೆಗಳನ್ನು ಸಹಾಯಕ ಅಭಿಯೋಜಕ ನಿರ್ದೇಶಕರು ಹಾಗೂ ಆಪಾದಿತರ ಪರ ವಕೀಲರು ಲಿಖಿತ ವಾದಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ಸೂಕ್ತ ನಿರ್ಣಯ ನೀಡಲು ಕೆಳಕಂಡ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.

**ಅಂಶ-1 :** ಈ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾದ ಅಂಬಾಸಿಡರ್ ಕಾರ್ ಸಂಖ್ಯೆ: ಕೆಎ-09-ಎಂ-2449 ನ್ನು ಶ್ರೀಗಂಧದ ಸಮೇತ ಅಮಾನತ್ತುಪಡಿಸಲಾಗಿದೆಯೇ? ಅಮಾನತ್ತುಪಡಿಸುವಾಗ ಕರ್ನಾಟಕ ಅರಣ್ಯ ಕಾಯ್ದೆ - 1963 ರ ಕಲಂ - 62 ರ ಪ್ರಕಾರ ಕ್ರಮಬದ್ಧವಾಗಿ ಅಮಾನತ್ತುಪಡಿಸಲಾಗಿದೆಯೇ.

**ಅಂಶ-2 :** ಅಮಾನತ್ತುಪಡಿಸಿಕೊಂಡ ಅಂಬಾಸಿಡರ್ ಕಾರಿನಲ್ಲಿದ್ದ ಮಾಲು ಸರ್ಕಾರದ ಸ್ವತ್ತು ಎಂದು ಘೋಷಿಸಲಾಗಿರುವ ಶ್ರೀಗಂಧವೇ?

**ಅಂಶ-3 :** ಅಮಾನತ್ತುಪಡಿಸಲಾಗಿರುವ ವಾಹನದ ಮಾಲೀಕರು ವಾಹನವನ್ನು ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ಬಳಸಲಾಗಿರುವುದಿಲ್ಲ ಎಂಬುದನ್ನು ಸಾಬೀತುಪಡಿಸಿರುವರೇ ಅಥವಾ ವಾಹನವು ಶ್ರೀಗಂಧದ ಕಳ್ಳ ಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲೀಕರು ಎಲ್ಲಾ ರೀತಿಯ ಮುಂಜಾಗ್ರತಾ ಕ್ರಮಗಳನ್ನು ಕೈಗೊಂಡಿದ್ದರೆ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ**

**ಅಂಶ-1 :** ಸಕಾರಾತ್ಮಕ

**ಅಂಶ-2 :** ಸಕಾರಾತ್ಮಕ

**ಅಂಶ-3 :** ನಕಾರಾತ್ಮಕ

**ಕಾರಣಗಳನ್ನು ಈ ಕೆಳಗೆ ವಿವರಿಸಲಾಗಿದೆ**

**ಅಂಶ ಸಂಖ್ಯೆ: 1**

ಶ್ರೀ ಎ.ಡಿ. ತಿಪ್ಪಯ್ಯ, ಪೊಲೀಸ್ ಉಪನಿರೀಕ್ಷಕರು, ಅಬ್ಬಿನಹೊಳೆ ಪೊಲೀಸ್ ಠಾಣೆ, ಅಬ್ಬಿನಹೊಳೆ ಇವರು ಠಾಣೆಯಲ್ಲಿ ಸ್ವೀಕೃತವಾದ ಖಚಿತ ವರ್ತಮಾನದನ್ವಯ ದಿನಾಂಕ: 31.8.1997 ರಂದು ಬೆಳಿಗ್ಗೆ ಸುಮಾರು 8.30 ಸಮಯದಲ್ಲಿ ಠಾಣೆಯ ಸಿಬ್ಬಂದಿಯೊಂದಿಗೆ ಅಬ್ಬಿನಹೊಳೆ ಬಸ್ ನಿಲ್ದಾಣದ ಬಳಿ ಕಾಯುತ್ತಿರುವ ಸಂದರ್ಭದಲ್ಲಿ ಹಿರಿಯೂರು ಕಡೆಯಿಂದ ಧರ್ಮಪುರದ ಕಡೆಗೆ ಹೋಗುತ್ತಿದ್ದ ಕಾರನ್ನು ನಿಲ್ಲಿಸಲು ಕೈ ಮಾಡಿ ನಿಲ್ಲಿಸಲು ಸೂಚನೆ ಮಾಡಿದರೂ ಸಹ ಸದರಿ ಕಾರು ನಿಲ್ಲದೆ ಮುಂದೆ ಹೋಗಿದ್ದರಿಂದ ಕಾರನ್ನು ಮೋಟಾರ್ ಸೈಕಲ್‌ಗಳಲ್ಲಿ ಬೆನ್ನಟ್ಟಿ ಅಬ್ಬಿನಹೊಳೆ ಗ್ರಾಮದ ಬಳಿ ಇರುವ ಕೆರೆ ಅಂಗಳದ ಬಳಿಯ ಸೇತುವೆ ಹತ್ತಿರ ಅಡ್ಡಗಟ್ಟಿ ಸಿಬ್ಬಂದಿಯೊಂದಿಗೆ ವಾಹನವನ್ನು ತಡೆದು ನಿಲ್ಲಿಸಿರುತ್ತಾರೆ. ವಾಹನವನ್ನು ಅಂಬಾಸಿಡರ್ ಕಾರ್ ಸಂಖ್ಯೆ: ಕೆಎ-09-ಎಂ-2449 ಎಂದು ಗುರುತಿಸಿರುತ್ತಾರೆ. ವಾಹನದಲ್ಲಿದ್ದ ಇಬ್ಬರು ವ್ಯಕ್ತಿಗಳನ್ನು ಪ್ರಶ್ನಿಸಲಾಗಿ ಇಬ್ಬರು ವ್ಯಕ್ತಿಗಳು ಕಾರಿನಲ್ಲಿ ಶ್ರೀಗಂಧವನ್ನು ಸಾಗಿಸುತ್ತಿರುವುದಾಗಿ ಹಾಗೂ ಸದರಿ ಶ್ರೀಗಂಧದ ಸಾಗಾಣಿಕೆಗೆ ಅಧಿಕೃತ ಪರವಾನಗಿ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಅಪರಾಧ ನಡೆದ ಸ್ಥಳಕ್ಕೆ ಪಂಚರನ್ನು ಕರೆಸಿ ವಾಹನದ ಒಳಗಿನಿಂದ ಒಂದು ಗೋಣಿ ಚೀಲದಲ್ಲಿದ್ದ ಶ್ರೀಗಂಧದ ತುಂಡುಗಳನ್ನು ಹೊರತೆಗೆದು ಪಂಚರ ಸಮಕ್ಷಮ ಮಹಜರ್ ಕ್ರಮ ಜರುಗಿಸಿ ತುಂಡುಗಳನ್ನು 13 ಭಾಗಗಳನ್ನಾಗಿ ವಿಂಗಡಣೆ ಮಾಡಿ, ತೂಕ ಮಾಡಿ ಶ್ರೀಗಂಧದ ತೂಕವು 17.500 ಕೆ.ಜಿ. ಇರುತ್ತದೆ.

ಸದರಿ ಪೊಲೀಸ್ ಉಪನಿರೀಕ್ಷಕರು, ಸರ್ಕಾರದ ಪರವಾಗಿ ವರದಿ ತಯಾರಿಸಿ ಕ್ರೈಂ ಸಂಖ್ಯೆ: 76/1997 ಎಂದು ಪ್ರಕರಣವನ್ನು ನೋಂದಾಯಿಸಿಕೊಂಡು ಅಮಾನತ್ತುಪಡಿಸಿಕೊಳ್ಳಲಾದ ಶ್ರೀಗಂಧದ ತುಂಡುಗಳ ಮೇಲೆ ನಂಬರ್ ಮತ್ತು ತೂಕವನ್ನು ನಮೂದಿಸಿರುತ್ತಾರೆ. ನಂತರ ಆರೋಪಿಗಳನ್ನು ಮತ್ತು ಅಮಾನತ್ತುಪಡಿಸಿಕೊಂಡಿರುವ ವಾಹನವನ್ನು ಜೆ.ಎಂ.ಎಫ್.ಸಿ. ನ್ಯಾಯಾಲಯದ ಮುಂದೆ ಹಾಜರುಪಡಿಸಿರುತ್ತಾರೆ.

ಪೊಲೀಸ್ ಉಪನಿರೀಕ್ಷಕರು ವಾಹನವನ್ನು ಮತ್ತು ಅದರಲ್ಲಿ ಕಳ್ಳಸಾಗಾಣಿಕೆ ಮಾಡಲಾಗುತ್ತಿದ್ದ ಶ್ರೀಗಂಧವನ್ನು ಅಮಾನತ್ತು ಪಡಿಸಿಕೊಳ್ಳುವಾಗ ಮತ್ತು ಮಹಜರ್ ನಡೆಸುವಾಗ ಕರ್ನಾಟಕ ಅರಣ್ಯ ಕಾಯ್ದೆ - 1963 ರ ಕಲಂ - 62ರ ಪ್ರಕಾರ ನಿಯಮಗಳನ್ನು ಪಾಲಿಸಿರುತ್ತಾರೆ.

ಸದರಿ ಪ್ರಕರಣವು ಅರಣ್ಯ ಕಾನೂನು ಕಾಯ್ದೆಗಳ ಉಲ್ಲಂಘನೆಗೆ ಸಂಬಂಧಿಸಿದ್ದರಿಂದ ಮುಂದಿನ ನಡವಳಿಕೆಗಳನ್ನು ನಡೆಸುವ ಬಗ್ಗೆ ವಾಹನ ಮತ್ತು ಅದರಲ್ಲಿದ್ದ ಶ್ರೀಗಂಧವನ್ನು ಈ ಪ್ರಾಧಿಕಾರಕ್ಕೆ ಜೆ.ಎಂ.ಎಫ್.ಸಿ. ನ್ಯಾಯಾಲಯ, ಹಿರಿಯೂರು ಇವರ ಮುಖಾಂತರ ಒಪ್ಪಿಸಿರುತ್ತಾರೆ. ಅಮಾನತ್ತುಪಡಿಸಿಕೊಳ್ಳಲಾಗಿರುವ ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿಗಳು, ಚಿತ್ರದುರ್ಗ ರವರು ಪರಿಶೀಲಿಸಿ ಶ್ರೀಗಂಧವೆಂದು ದೃಢೀಕರಿಸಿರುತ್ತಾರೆ.

ವಿಚಾರಣೆ ಸಮಯದಲ್ಲಿ ಪ್ರಾಸಿಕ್ಯೂಷನ್ ಸಾಕ್ಷಿ-4, ಶ್ರೀ ಎ.ಡಿ. ತಿಪ್ಪಯ್ಯ, ಪೊಲೀಸ್ ಉಪನಿರೀಕ್ಷಕರು, ಅಬ್ಬಿನಹೊಳೆ ಪೊಲೀಸ್ ಠಾಣೆ ಇವರಿಗೆ ಅವರು ನ್ಯಾಯಾಲಯಕ್ಕೆ ಸಲ್ಲಿಸಿದ ವರದಿಯನ್ನು ತೋರಿಸಲಾಯಿತು. ಸದರಿ ವರದಿಯನ್ನು ನಿಶಾನೆ-P4 ಎಂಬುದಾಗಿ ಹಾಗೂ ವರದಿಯಲ್ಲಿರುವ ಅವರ ಸಹಿಯನ್ನು P4(a) ಎಂದು ಗುರುತಿಸಲಾಯಿತು.

ಮ್ಯಾಜಿಸ್ಟ್ರೇಟರಿಗೆ ಸಲ್ಲಿಸಿದ ಸ್ವತ್ತಿನ ಪಟ್ಟಿಯನ್ನು ನಿಶಾನೆ P3 ಎಂದು ಗುರುತಿಸಲಾಗಿದೆ. ಪೊಲೀಸ್ ಉಪನಿರೀಕ್ಷಕರ ಸಹಿಯನ್ನು ನಿಶಾನೆ P3(a) ಎಂದು ಗುರುತಿಸಲಾಗಿದೆ. ಮಹಜರ್ ಪ್ರತಿಯನ್ನು ತೋರಿಸಲಾಗಿ ಮಹಜರ್ ಪ್ರತಿ ಹಾಗೂ ಅದರಲ್ಲಿರುವ ಸಹಿಯನ್ನು ಸದರಿ ಸಾಕ್ಷಿದಾರರು ಗುರುತಿಸಿದ್ದು, ಮಹಜರ್ ಪ್ರತಿಯನ್ನು P-I ಎಂದು ಮತ್ತು ಸಾಕ್ಷಿದಾರರ ಸಹಿಯನ್ನು ನಿಶಾನೆ P-I(D) ಎಂದು ಗುರುತಿಸಲಾಗಿದೆ. ಸಾಕ್ಷಿದಾರರು ಮಹಜರ್ ಮಾಡುವ ಕಾಲದಲ್ಲಿ ವಶಪಡಿಸಿಕೊಳ್ಳಲಾದ ವಾಹನ ಕಾರು ಸಂಖ್ಯೆ: ಕೆಎ-09-ಎಂ-2449 ನ್ನು ನೋಡಿದರೆ ಗುರುತಿಸುವುದಾಗಿ ಸಾಕ್ಷಿ ನುಡಿದಿರುತ್ತಾರೆ ಹಾಗೂ ಅದೇ ಕಾರು ಈ ಪ್ರಾಧಿಕಾರದ ಮುಂದೆ ಇರುವುದಾಗಿ ಸಾಕ್ಷಿ ಹೇಳಿರುತ್ತಾರೆ. ಸದರಿ ಕಾರು ಮುದ್ದೆ ಮಾಲು - 1 ಎಂದು ಆಗಿರುತ್ತದೆ.

ಸದರಿ ಸಾಕ್ಷಿದಾರರು ಶ್ರೀ ಹೆಚ್.ಎಸ್. ಮಂಜುನಾಥ್ ಆರೋಪಿ ಪರ ವಕೀಲರು ಮಾಡಿದ ಪಾಟೀಸವಾಲಿನಲ್ಲಿ ನಿಶಾನೆ P-I ಮಹಜರನ್ನು ಪ್ರಾಸಿಕ್ಯೂಷನ್ ಸಾಕ್ಷಿ-1, ಶ್ರೀ ಜಿ.ಆರ್. ವೆಂಕಟೇಶ್ ರೆಡ್ಡಿ ಅವರಿಂದ ಪಂಚರ ಸಮಕ್ಷಮ ಬರೆಸಲಾಗಿರುವುದಾಗಿ

ತಿಳಿಸಿರುತ್ತಾರೆ. ಅಮಾನತ್ತುಪಡಿಸಿಕೊಂಡ ಶ್ರೀಗಂಧದ ತುಂಡುಗಳನ್ನು 13 ಭಾಗಗಳನ್ನಾಗಿ ಮಾಡಿ ತೂಕ ಮಾಡಿರುವುದಾಗಿಯೂ ತಿಳಿಸಿರುತ್ತಾರೆ. ತಕ್ಕಡಿಯನ್ನು ಸಿಬ್ಬಂದಿಯಾದ ವೆಂಕಟೇಶರೆಡ್ಡಿ ಮತ್ತು ಕುಮಾರ ಎಂಬುವರು ತಂದಿರುತ್ತಾರೆ ಎಂದು ಉತ್ತರಿಸಿರುತ್ತಾರೆ. ಶ್ರೀಗಂಧದ ತುಂಡುಗಳನ್ನು ಅರಣ್ಯ ಇಲಾಖೆಯ ಅಧಿಕಾರಿಗಳು ಪರೀಕ್ಷಿಸಿ ಶ್ರೀಗಂಧವೇ ಎಂದು ಪ್ರಮಾಣ ಪತ್ರ ನೀಡಿರುವುದಾಗಿ ತಿಳಿಸಿರುತ್ತಾರೆ. ಪಾಟೀ ಸವಾಲಿನ ಸಮಯದಲ್ಲಿ ಮಹಜರ್ ಅನ್ನು ಪ್ರಾಸಿಕ್ಯೂಷನ್ ಸಾಕ್ಷಿ-1, ಶ್ರೀ ವೆಂಕಟೇಶ್‌ರೆಡ್ಡಿ ಬರೆದಿರುವುದೆಂದು ಮಹಜರ್‌ನಲ್ಲಿ ನಮೂದಿಸಿಲ್ಲವೆಂದು ಉತ್ತರಿಸಿರುತ್ತಾರೆ. ಶ್ರೀಗಂಧದ ತುಂಡುಗಳಿಗೆ ನಂಬರನ್ನು ಯಾವ ಬಣ್ಣದ ಶಾಯಿಯಲ್ಲಿ ಬರೆಯಲಾಗಿದೆ ಎಂಬುದನ್ನು ತಿಳಿಸಲು ಅಸಾಧ್ಯ ಎಂದು ಉತ್ತರಿಸಿರುತ್ತಾರೆ.

ಪದ್ಧತಿಯಂತೆ ಮುದ್ದೆ ಮಾಲುಗಳ ಮೇಲೆ ಚೀಟಿಯನ್ನು ಅಂಟಿಸಿ, ಚೀಟಿಯ ಮೇಲೆ ಠಾಣೆಯ ಗುನ್ಹೆ ಸಂಖ್ಯೆ, ಮಾಲು ಪಟ್ಟಿ ಸಂಖ್ಯೆಗಳನ್ನು ಬರೆದು ಸಹಿ ಮಾಡಿರುವುದಾಗಿ ಉತ್ತರಿಸಿರುತ್ತಾರೆ. ಮುದ್ದೆ ಮಾಲು-2ರ ಮೇಲೆಯೂ ಈ ರೀತಿ ಚೀಟಿ ಅಂಟಿಸಿದ್ದು, ಸದರಿ ಚೀಟಿಯ ಮುದ್ದೆ ಮಾಲನ್ನು ಅತ್ತಿತ್ತ ಇಡುವ ಸಮಯದಲ್ಲಿ ಬಿದ್ದಿರಬಹುದೆಂದು ಹಾಗೂ ಚೀಟಿ ಅಂಟಿಸಿ ಸುಮಾರು ವರ್ಷಗಳಾಗಿರುವ ಕಾರಣ ಅಂಟಿಸಿದ ಕಲೆಯು ಮುದ್ದೆ ಮಾಲು-2 ರ ಮೇಲೆ ಇರುವುದಿಲ್ಲವೆಂದು ಉತ್ತರಿಸಿರುತ್ತಾರೆ.

ಪ್ರಾಸಿಕ್ಯೂಷನ್ ಸಾಕ್ಷಿ-1, ಜಿ.ಆರ್. ವೆಂಕಟೇಶ್‌ರೆಡ್ಡಿ ಯವರು ಸಹಾಯಕ ಅಭಿಯೋಜಕ ನಿರ್ದೇಶಕರು ಮಾಡಲಾದ ಮುಖ್ಯ ವಿಚಾರಣೆಯಲ್ಲಿ ನುಡಿದಿರುವ ಸಾಕ್ಷ್ಯವು ಪ್ರಾಸಿಕ್ಯೂಷನ್ ಸಾಕ್ಷಿ-4, ಶ್ರೀ ಎ.ಡಿ. ತಿಪ್ಪಯ್ಯ ಇವರ ಸಾಕ್ಷ್ಯಕ್ಕೆ ಪುಷ್ಟಿ ಕೊಡುತ್ತದೆ. ಆದರೆ ಸದರಿ ಸಾಕ್ಷಿದಾರರು (ಪ್ರಾಸಿಕ್ಯೂಷನ್ ಸಾಕ್ಷಿ-1) ಶ್ರೀ ಹೆಚ್.ಎಸ್. ಮಂಜುನಾಥ್ ಆರೋಪಿ ಪರ ವಕೀಲರು ನಡೆಸಿದ ಪಾಟೀ ಸವಾಲಿನ ಸಂದರ್ಭದಲ್ಲಿ ಕಾರಿನ ಹಿಂಬದಿಯ ಡಿಕ್ಕಿಯಲ್ಲಿ ಗೋಣಿ ಚೀಲ ಇದ್ದುದು ಕಂಡು ಬಂದಿರುವುದಾಗಿಯೂ, ಮಹಜರ್‌ನಲ್ಲಿ ಗೋಣಿ ಚೀಲವನ್ನು ಬರೆದಿರುವುದಿಲ್ಲ ಎಂದು ಉತ್ತರ ನೀಡಿರುತ್ತಾರೆ. ತಕ್ಕಡಿ ಹಾಗೂ ತೂಕದ ಕಲ್ಲುಗಳನ್ನು ಒಬ್ಬ ಹುಡುಗನಿಂದ ತರಿಸಿ ಶ್ರೀಗಂಧದ ತೂಕ ಮಾಡಲಾಯಿತು ಹಾಗೂ ಹುಡುಗನ ಹೆಸರು ಗೊತ್ತಿಲ್ಲ ಎಂದು ಉತ್ತರಿಸಿರುತ್ತಾರೆ. ಅಮಾನತ್ತುಪಡಿಸಿಕೊಂಡ ತುಂಡುಗಳ ಮೇಲೆ ವಿಶೇಷ ಗುರುತು ಮಾಡಿರುವ ಬಗ್ಗೆ ಗೊತ್ತಿಲ್ಲವೆಂತಲೂ ಹಾಗೂ ಸ್ಥಳದಲ್ಲಿದ್ದವರಿಂದ ಮಹಜರ್‌ಗೆ ಸಹಿ ಮಾಡಿಸಿರುತ್ತಾರೆಂದು, ಸ್ಥಳದಲ್ಲಿಯೇ ಮಹಜರ್ ಬರೆಯಲಾಯಿತೆಂದು ಉತ್ತರಿಸಿರುತ್ತಾರೆ.

ಪ್ರಾಸಿಕ್ಯೂಷನ್ ಸಾಕ್ಷಿ-2, ಶ್ರೀ ಎ.ಡಿ. ಗುರುಶಾಂತಪ್ಪ ಬಿನ್ ಶ್ರೀ ದೊಡ್ಡ ಹನುಮಪ್ಪ ನಂ. 225 (ಹಿಂದಿನ ಬಕಲ್ ನಂ. 322) ಪರಶುರಾಂಪುರ ಪೊಲೀಸ್ ಠಾಣೆ, ಪರಶುರಾಂಪುರ ಇವರು ಸಹಾಯಕ ಅಭಿಯೋಜಕ ನಿರ್ದೇಶಕರವರಿಂದ ನಡೆಸಲಾದ ಮುಖ್ಯ ವಿಚಾರಣೆಯಲ್ಲಿ ನೀಡಲಾದ ಸಾಕ್ಷ್ಯವು ಪ್ರಾಸಿಕ್ಯೂಷನ್ ಸಾಕ್ಷಿ-4, ಶ್ರೀ ಎ.ಡಿ. ತಿಪ್ಪಯ್ಯ ಇವರು ನೀಡಿರುವ ಹೇಳಿಕೆಯನ್ನು ಸಮರ್ಥಿಸುತ್ತದೆ.

ಪ್ರಾಸಿಕ್ಯೂಷನ್ ಸಾಕ್ಷಿ-3, ಶ್ರೀ ಬಿ. ಜುಂಜಪ್ಪ ಬಿನ್ ಭೀಮಣ್ಣ, ಸಂಗೇನಹಳ್ಳಿ, ಹಿರಿಯೂರು ತಾ: ಇವರು ಪಂಚರಾಗಿದ್ದು, ಮಹಜರ್ ಮೇಲೆ ಸಹಿ ಮಾಡಿರುತ್ತಾರೆ. ಇವರು ಸಹಾಯಕ ಅಭಿಯೋಜಕ ನಿರ್ದೇಶಕರವರಿಂದ ಮಾಡಲಾದ ಮುಖ್ಯ ವಿಚಾರಣಾ ಸಮಯದಲ್ಲಿ ಈ ಕೆಳಗಿನಂತೆ ಸಾಕ್ಷ್ಯ ನುಡಿದಿರುತ್ತಾರೆ.

ಸದರಿಯವರು ನ್ಯಾಯಾಲಯದ ಎದುರು ಇರುವ ತಿರುಮಲೇಶ ಇವರು ಗೊತ್ತಿಲ್ಲವೆಂದು ಮಹಜರಿಗೆ ಸಹಿಯನ್ನು ಪೊಲೀಸ್ ಠಾಣೆಯಲ್ಲಿ ಸ್ವಂತ ಕೆಲಸದ ಮೇಲೆ ಹೋದಾಗ ಪೊಲೀಸ್ ರೈಟರ್ ಹೇಳಿದಂತೆ ಒಂದು ಕಾಗದದ ಮೇಲೆ ಮಾಡಿರುವುದಾಗಿ ತಿಳಿಸಿರುತ್ತಾರೆ. ನಿಶಾನೆ P-I ರಲ್ಲಿನ ಅವರ ಸಹಿಯನ್ನು ಗುರುತಿಸಿರುತ್ತಾರೆ. ಸಹಿ ಮಾಡುವ ಮೊದಲು ಕಾಗದದಲ್ಲಿ ಏನು ಬರೆದಿದೆ ಎಂಬ ಬಗ್ಗೆ ಪೊಲೀಸರು ತಿಳಿಸಲಿಲ್ಲವೆಂದು ಹಾಗೂ ವಿಚಾರಿಸಿದಾಗ ಒಬ್ಬ ವ್ಯಕ್ತಿಯನ್ನು ಹಾಗೂ ಶ್ರೀಗಂಧದ ತುಂಡನ್ನು ತೋರಿಸಿ ಮಹಜರ್ ಮಾಡಿಕೊಂಡು ಬಂದಿದ್ದೇವೆ. ಆದಕ್ಕೆ ಸಹಿ ಮಾಡು ಎಂದು ತಿಳಿಸಿದ್ದರಿಂದ ಸಹಿ ಮಾಡಿರುತ್ತೇನೆ ಎಂದು ತಿಳಿಸಿರುತ್ತಾರೆ.

ಸದರಿ ಸಾಕ್ಷಿದಾರರು ಮಹಜರ್‌ನಲ್ಲಿ ನಮೂದಿಸಿದ ವಿಷಯಗಳಿಗೆ ವ್ಯತಿರಿಕ್ತವಾಗಿ ಹೇಳಿಕೆ ನೀಡಿದ್ದರಿಂದ ಸದರಿಯವರನ್ನು ಪ್ರತಿಕೂಲ ಸಾಕ್ಷಿ ಎಂದು ಪರಿಗಣಿಸಲು ಸಹಾಯಕ ಅಭಿಯೋಜಕ ನಿರ್ದೇಶಕರ ಕೋರಿಕೆಯಂತೆ, ಸಹಾಯಕ ಅಭಿಯೋಜಕ ನಿರ್ದೇಶಕರವರಿಗೆ ಸದರಿಯವರನ್ನು ಪಾಟೀ ಸವಾಲಿಗೆ ಒಳಪಡಿಸಿದಾಗ ಶ್ರೀ ಜುಂಜಪ್ಪ ಇವರು ಮಹಜರಿನಲ್ಲಿ ನಮೂದಿಸಲಾಗಿರುವ ಎಲ್ಲಾ ವಿವರಗಳನ್ನು ನಿರಾಕರಿಸಿರುತ್ತಾರೆ. ಮುದ್ದೆ ಮಾಲು-2ನ್ನು ಸ್ಥಳದಲ್ಲಿ ನೋಡಿದ್ದೇನೆ ಎಂಬುದು ಹಾಗೂ ಮುದ್ದೆ ಮಾಲು-1 (ಕಾರು) ನೋಡಿದ್ದೇನೆ ಎನ್ನುವುದು ಸರಿ ಇಲ್ಲ ಹಾಗೂ ಅರ್ಜಿದಾರರಿಗೆ ಅನುಕೂಲವಾಗಲೆಂದು ಸುಳ್ಳು ಸಾಕ್ಷಿ ಹೇಳುತ್ತಿಲ್ಲ ಎಂದು ನುಡಿದಿರುತ್ತಾರೆ.

ಪ್ರಾಸಿಕ್ಯೂಷನ್ ಸಾಕ್ಷಿ-5, ಶ್ರೀ ರಂಗಸ್ವಾಮಿ ಬಿನ್ ಶ್ರೀ ಜಿ. ರಂಗಪ್ಪ, ಇಕ್ಕನೂರು ಗ್ರಾಮ, ಹಿರಿಯೂರು ತಾ: ಇವರು ಸಹಾ ಪಂಚಸಾಕ್ಷಿಯಾಗಿರುತ್ತಾರೆ. ಸದರಿ ಪಂಚ ಸಾಕ್ಷಿಯನ್ನು ಸಹಾಯಕ ಅಭಿಯೋಜಕ ನಿರ್ದೇಶಕರವರು ಮುಖ್ಯ ವಿಚಾರಣೆಗೊಳಪಡಿಸಿದ ಸಂದರ್ಭದಲ್ಲಿ ಈ ಕೆಳಗಿನಂತೆ ಸಾಕ್ಷಿ ನುಡಿದಿರುತ್ತಾರೆ. ದಿನಾಂಕ: 31.8.1997 ರಂದು ಬೆಳಿಗ್ಗೆ ಸುಮಾರು 7.45 ಅಥವಾ 8.00 ಗಂಟೆ ವೇಳೆಯಲ್ಲಿ ಅಬ್ಬಿನಹೊಳೆಗೆ ಹೋಗುತ್ತಿದ್ದಾಗ ಹಿರಿಯೂರಿನಿಂದ ಧರ್ಮಪುರಕ್ಕೆ ಹೋಗುವ ಅಬ್ಬಿನಹೊಳೆ ಹಾಗೂ ಚಿಲ್ಲಹಳ್ಳಿ ಮಧ್ಯದಲ್ಲಿ ಬಿಳಿ ಬಣ್ಣದ ಅಂಬಾಸಿಡರ್ ಕಾರ್ ಸಂಖ್ಯೆ: ಕೆಎ-09-ಎಂ-2449 ನಿಂತಿದ್ದನ್ನು ನೋಡಿದ್ದಾಗಿ ತಿಳಿಸಿರುತ್ತಾರೆ.

ಆಗ ಸ್ಥಳದಲ್ಲಿದ್ದ ಪೊಲೀಸರು ಸದರಿಯವರನ್ನು ಹಾಗೂ ಭೀಮಣ್ಣ ಅಥವಾ ಜುಂಜಪ್ಪ ಇವರನ್ನು ಸಹಾ ಸದರಿ ಸ್ಥಳಕ್ಕೆ ಕರೆಸಿದ್ದಾಗ ತಿಳಿಸಿರುತ್ತಾರೆ. ಕಾರಿನಲ್ಲಿ ಒಂದು ಗೋಣಿ ಚೀಲದ ತುಂಬ ಶ್ರೀಗಂಧದ ತುಂಡುಗಳು ಇದ್ದು, ಸದರಿ ಗೋಣಿ ಚೀಲವು ಕಾರಿನ ಡಿಕ್ಕಿಯಲ್ಲಿದ್ದುದ್ದಾಗಿ ತಿಳಿಸಿ, ವಾಹನದ ಚಾಲಕನನ್ನು ಗುರ್ತಿಸುವುದಾಗಿಯೂ ತಿಳಿಸಿರುತ್ತಾರೆ ಹಾಗೂ ಮತ್ತೊಬ್ಬ ವ್ಯಕ್ತಿಯನ್ನು ಗುರುತು ಹಿಡಿಯಲು ಆಗುವುದಿಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

ಸದರಿ ಸಾಕ್ಷಿದಾರರು ಠಾಣೆಯಲ್ಲಿ ಚೀಲದಲ್ಲಿದ್ದ ಶ್ರೀಗಂಧದ ತುಂಡುಗಳನ್ನು ಎಣಿಸಿದ್ದಾಗಿಯೂ, ಎಣಿಕೆ ಮಾಡಿದ್ದನ್ನು ತಾವು ನೋಡಿಲ್ಲವೆಂದು ತಿಳಿಸಿರುತ್ತಾರೆ. ಪೊಲೀಸ್ ಠಾಣೆಯಲ್ಲಿ ಮಹಜರ್‌ಗೆ ಸಹಿ ಮಾಡಿಸಿರುವುದಾಗಿ ತಿಳಿಸಿರುತ್ತಾರೆ (ನಿಶಾನೆ P-I) ಹಾಗೂ ನಿಶಾನೆ P-I ರ ತಮ್ಮ ಸಹಿಯನ್ನು (ನಿಶಾನೆ P-I (ಇ)) ಗುರುತಿಸಿರುತ್ತಾರೆ. ಮುದ್ದೆ ಮಾಲುಗಳಾದ ಅಂಬಾಸಿಡರ್ ಕಾರು M-1 ಮತ್ತು ಶ್ರೀಗಂಧದ ತುಂಡು M-2 ನ್ನು ನೋಡಿ ಗುರುತಿಸಿರುತ್ತಾರೆ. ಈ ಹಂತದಲ್ಲಿ ಸಹಾಯಕ ಅಭಿಯೋಜಕ ನಿರ್ದೇಶಕರವರು ಸಾಕ್ಷಿದಾರರನ್ನು

ಪ್ರತಿಕೂಲ ಸಾಕ್ಷಿ ಎಂದು ಪರಿಗಣಿಸಲು ಕೋರಿದ್ದರಿಂದ ಸದರಿಯವರ ಮನವಿಯಂತೆ ಸಾಕ್ಷಿದಾರರ ಪಾಟೀ ಸವಾಲನ್ನು ಮಾಡಲು ಸಹಾಯಕ ಅಭಿಯೋಜಕ ನಿರ್ದೇಶಕರಿಗೆ ಅನುಮತಿ ನೀಡಲಾಯಿತು.

ಪಾಟೀ ಸವಾಲಿನಲ್ಲಿ ಸಾಕ್ಷಿದಾರರು ಪ್ರಾಸಿಕ್ಯೂಷನ್ ಸಾಕ್ಷಿ-3, ಶ್ರೀ ಬಿ. ಜುಂಜಪ್ಪ ಹಾಗೂ ತಾವು ಸ್ಥಳದಲ್ಲಿ ಹಾಜರಾದ್ದದ್ದನ್ನು ಒಪ್ಪಿಕೊಂಡಿರುತ್ತಾರೆ. ಸ್ಥಳದಲ್ಲಿ ತೂಕ ಮಾಡಿದ 17.500 ಕೆ.ಜಿ. ಶ್ರೀಗಂಧದ ಪೈಕಿ ಎಂ-2 ಶ್ರೀಗಂಧದ ತುಂಡನ್ನು ಮಾದರಿಗಾಗಿ ತೆಗೆದುಕೊಂಡಿದ್ದನ್ನು ವಾಹನದ ಚಾಲಕ ಮತ್ತು ಇನ್ನೊಬ್ಬ ವ್ಯಕ್ತಿಯನ್ನು ಪೊಲೀಸರು ಸುಪರ್ದಿಗೆ ತೆಗೆದುಕೊಂಡದ್ದನ್ನು, ವಾಹನ ಮತ್ತು ಗೋಣಿ ಚೀಲವನ್ನು ವಶಪಡಿಸಿಕೊಂಡಿದ್ದನ್ನು ನಿಜ ಎಂದು ಒಪ್ಪಿಕೊಂಡಿರುತ್ತಾರೆ.

ನಿಶಾನೆ P-I ಮಹಜರನ್ನು ಸ್ಥಳದಲ್ಲೇ ಬರೆದು ಅದಕ್ಕೆ ಸ್ಥಳದಲ್ಲಿಯೇ ಸಹಿ ಮಾಡಿದ್ದಾಗಿ ತಿಳಿಸಿ, ನಿಶಾನೆ P-I ಹಾಗೂ ಅದರಲ್ಲಿನ ಅವರ ಸಹಿಯನ್ನು ಗುರುತಿಸಿರುತ್ತಾರೆ.

ಆರೋಪಿ ಪರ ವಕೀಲರು ನಡೆಸಿದ ಪಾಟೀಸವಾಲಿನಲ್ಲಿ ಸಾಕ್ಷಿದಾರರು ತಾವು PUC ಯಲ್ಲಿ ಉತ್ತೀರ್ಣರಾಗಿರುವುದಾಗಿ ತಿಳಿಸಿರುತ್ತಾರೆ ಹಾಗೂ ಮೇಲೆ ಸಹಾಯಕ ಅಭಿಯೋಜಕ ನಿರ್ದೇಶಕರು ಮಾಡಿದ ಪಾಟೀ ಸವಾಲಿನಲ್ಲಿ ನೀಡಿದ ಎಲ್ಲಾ ಹೇಳಿಕೆಗಳನ್ನು ನಿರಾಕರಿಸಿರುತ್ತಾರೆ.

ಸಹಾಯಕ ಅಭಿಯೋಜಕ ನಿರ್ದೇಶಕರ ಮತ್ತು ಶ್ರೀ ಹೆಚ್.ಎಸ್. ಮಂಜುನಾಥ, ಆರೋಪಿ ಪರ ವಕೀಲರ ಲಿಖಿತ ವಾದಗಳನ್ನು ಪರಿಶೀಲಿಸಲಾಗಿದೆ. ಸದರಿ ಲಿಖಿತ ವಾದಗಳನ್ನು ಪರಿಶೀಲಿಸಿದ ನಂತರ ಹಾಗೂ ಪ್ರಾಸಿಕ್ಯೂಷನ್ ಸಾಕ್ಷಿ-3, ಶ್ರೀ ಬಿ. ಜುಂಜಪ್ಪ ಇವರು ನಿವೃತ್ತ ಪ್ರಥಮ ದರ್ಜೆ ಗುಮಾಸ್ತರಾಗಿದ್ದು, ವಿದ್ಯಾವಂತರಾಗಿದ್ದು, ಮಹಜರ್‌ಗೆ ಪೊಲೀಸ್ ಠಾಣೆಯಲ್ಲಿ ಸಹಿ ಮಾಡಿದ್ದಾಗಿಯೂ ಹಾಗೂ ಮಹಜರಿನಲ್ಲಿ ನಮೂದಿಸಲಾಗಿರುವ ಅಂಶಗಳು ತನಗೆ ತಿಳಿದಿಲ್ಲವೆಂದು ಪ್ರಾಧಿಕಾರ ಮುಂದೆ ಸಾಕ್ಷ್ಯ ನುಡಿಯುತ್ತಿರುವುದನ್ನು ನಂಬಲು ಅರ್ಹವಾಗಿರುವುದಿಲ್ಲ ಕಾರಣ ಸಾಕ್ಷಿದಾರರು ವಿದ್ಯಾವಂತರಾಗಿದ್ದು, ನಿವೃತ್ತ ನೌಕರರಾಗಿದ್ದು, ಯಾವುದೇ ಕಾಗದ ಪತ್ರಗಳನ್ನು ಓದದೇ ಸಹಿ ಮಾಡಿರುತ್ತಾರೆ ಎಂಬ ವಿಷಯವು ನಂಬಲು ಶಕ್ಯವಿರುವುದಿಲ್ಲ. ಪ್ರಾಸಿಕ್ಯೂಷನ್ ಸಾಕ್ಷಿ-5, ಶ್ರೀ ರಂಗಸ್ವಾಮಿ ಇವರು ಸಹಾಯಕ ಅಭಿಯೋಜಕ ನಿರ್ದೇಶಕರು ನಡೆಸಿದ ಮುಖ್ಯ ವಿಚಾರಣೆ ಹಾಗೂ ಪಾಟೀ ಸವಾಲಿನಲ್ಲಿ ಕೃತ್ಯ ನಡೆದ ಸ್ಥಳದಲ್ಲಿ ಅವರು ಹಾಗೂ ಪ್ರಾಸಿಕ್ಯೂಷನ್ ಸಾಕ್ಷಿ-3, ಶ್ರೀ ಬಿ. ಜುಂಜಪ್ಪ ಅವರು ಹಾಜರಿದ್ದದ್ದು ನಿಜ ಎಂದು ಹಾಗೂ ವಾಹನದಲ್ಲಿದ್ದ ಶ್ರೀಗಂಧವನ್ನು ತೂಕ ಮಾಡಿ ಅದರಲ್ಲಿ ಎಂ-2 ಎಂದು 1 ತುಂಡನ್ನು ಮಾದರಿಯಾಗಿ ಪಂಚರ ಸಮಕ್ಷಮ ತೆಗೆದಿರಿಸಿಕೊಂಡಿದ್ದು ಮತ್ತು ಸ್ಥಳದಲ್ಲಿ ವಾಹನದಲ್ಲಿದ್ದ ಇಬ್ಬರು ವ್ಯಕ್ತಿಗಳನ್ನು, ಶ್ರೀಗಂಧವನ್ನು ಹಾಗೂ ಗೋಣಿ ಚೀಲವನ್ನು ಪೊಲೀಸರ ಸುಪರ್ದಿಗೆ ತೆಗೆದುಕೊಂಡಿದ್ದು ನಿಜ ಎಂದು ಸಾಕ್ಷಿ ನುಡಿದಿರುತ್ತಾರೆ ಹಾಗೂ ಮಹಜರ್ ನಿಶಾನೆ P-I ಕ್ಕೆ ಸ್ಥಳದಲ್ಲಿಯೇ ಶ್ರೀ ಜುಂಜಪ್ಪ ಹಾಗೂ ತಾವು ಸಹಿ ಮಾಡಿದ್ದನ್ನು ಒಪ್ಪಿಕೊಂಡಿರುತ್ತಾರೆ.

ಆರೋಪಿ ಪರ ವಕೀಲರು ನಡೆಸಿದ ಪಾಟೀ ಸವಾಲಿನಲ್ಲಿ ಮೇಲ್ಕಂಡ ಸಹಾಯಕ ಅಭಿಯೋಗ ನಿರ್ದೇಶಕರು ರವರ ಮುಖ್ಯ ವಿಚಾರಣೆ ಹಾಗೂ ಪಾಟೀ ಸವಾಲಿನಲ್ಲಿ ನೀಡಿರುವ ಹೇಳಿಕೆಗಳನ್ನು ನಿರಾಕರಿಸಿರುತ್ತಾರೆ.

ಸದರಿ ಸಾಕ್ಷಿದಾರರು ಆರೋಪಿ ಪರ ವಕೀಲರ ಮುಂದೆ ನೀಡಿದ ಹೇಳಿಕೆಯು ನಂಬಲರ್ಹವಾಗಿರುವುದಿಲ್ಲ. ಸಾಕ್ಷಿದಾರರಿಗೆ ಕಾರಿನಲ್ಲಿ ಶ್ರೀಗಂಧ ಇದ್ದ ವಿಷಯ, ಸ್ಥಳದಲ್ಲೇ ಮಹಜರ್ ಜರುಗಿಸಿದ ವಿಷಯ, ವಾಹನ ಮತ್ತು ಮಾಲನ್ನು ಅಮಾನತ್ತುಪಡಿಸಿಕೊಂಡ ವಿಷಯಗಳು ಗೊತ್ತಿರುತ್ತದೆ ಎಂಬುದು ಖಚಿತವಾಗುತ್ತದೆ.

ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರಾದ ಪ್ರಾಸಿಕ್ಯೂಷನ್ ಸಾಕ್ಷಿ 1, ಶ್ರೀ ಜಿ.ಆರ್. ವೆಂಕಟೇಶ ರೆಡ್ಡಿ, ಪ್ರಾಸಿಕ್ಯೂಷನ್ ಸಾಕ್ಷಿ-2, ಶ್ರೀ ಎ.ಡಿ. ಗುರುಶಾಂತಪ್ಪ ಮತ್ತು ಪ್ರಾಸಿಕ್ಯೂಷನ್ ಸಾಕ್ಷಿ-4, ಶ್ರೀ ಎ.ಡಿ. ತಿಪ್ಪಯ್ಯ ಇವರುಗಳು ಸರ್ಕಾರದ ಅಧಿಕಾರಿ / ನೌಕರರುಗಳಾಗಿದ್ದು, ಸದರಿಯವರಿಗೆ ಈ ಪ್ರಕರಣದಲ್ಲಿ ಯಾವುದೇ ಸ್ವಂತ ಹಿತಾಸಕ್ತಿ ಇರುವುದಿಲ್ಲವಾದ್ದರಿಂದ ಮೇಲ್ಕಂಡವರು ಕಾನೂನು ರೀತಿ ಎಲ್ಲಾ ಕ್ರಮಗಳನ್ನು ಯಾವುದೇ ರೀತಿಯ ಪೂರ್ವಾಗ್ರಹವಿಲ್ಲದೇ ನಿರ್ವಹಿಸುತ್ತಿರುತ್ತಾರೆಂದು ಈ ಪ್ರಾಧಿಕಾರವು ನಂಬುತ್ತದೆ.

ಮೇಲ್ಕಂಡ ಎಲ್ಲಾ ಸಾಕ್ಷಿಗಳು ವಾಹನದಲ್ಲಿ ಶ್ರೀಗಂಧವು ಇದ್ದುದ್ದನ್ನು ಅಲ್ಲಗಳೆದಿರುವುದಿಲ್ಲ. ವಾಹನದ ಯಾವ ಭಾಗದಲ್ಲಿ ಶ್ರೀಗಂಧ ಇತ್ತು ಎಂಬುದು ಪ್ರಮುಖವಾಗಿರದೆ ಕಾರಿನಲ್ಲಿ ಶ್ರೀಗಂಧದ ತುಂಡುಗಳು ಇದ್ದದ್ದು ಮುಖ್ಯವಾಗಿರುತ್ತದೆ ಹಾಗೂ ತಕ್ಕಡಿ ಹಾಗೂ ತೂಕದ ಕಲ್ಲುಗಳನ್ನು ಯಾರು, ಎಲ್ಲಿಂದ ತಂದರು ಎಂಬುದು ಸಹಾ ಗಣನೆಗೆ ತೆಗೆದುಕೊಳ್ಳಬೇಕಾದ ವಿಷಯವಾಗಿರುವುದಿಲ್ಲ. ಸ್ಥಳಕ್ಕೆ ಎಷ್ಟು ಮಂದಿ ಹೋಗಿದ್ದರು, ಯಾವ ರೀತಿ ಹೋಗಿದ್ದರು ಎಂಬುದು ಗಣನೆಗೆ ತೆಗೆದುಕೊಳ್ಳುವಂತಹ ಪ್ರಮುಖವಾದ ಅಂಶವಾಗಿರುವುದಿಲ್ಲ.

ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಅಂಶ-1ಕ್ಕೆ ಉತ್ತರ - ಸಕಾರಾತ್ಮಕ.

**ಅಂಶ - 2**

ಕರ್ನಾಟಕ ಅರಣ್ಯ ಕಾಯ್ದೆ - 1963 ರ ಕಲಂ 80, 84ರ ಪ್ರಕಾರ ಶ್ರೀಗಂಧವು ಎಲ್ಲೇ ಬೆಳೆದಿದ್ದರೂ ರಾಜ್ಯ ಸರ್ಕಾರದ ಸ್ವತ್ತಾಗಿರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ - 1963 ರೆಡ್‌ವಿತ್ ರೂಲ್ - 154 ಮತ್ತು 155 ತಿಳಿಯಪಡಿಸುವುದೇನೆಂದರೆ ಶ್ರೀಗಂಧದ ಕಳ್ಳ ಸಾಗಾಣಿಕೆಯ ಬಗ್ಗೆ ಪ್ರಕರಣವು ದಾಖಲಾದ ಬಳಿಕ ಅಂತಹ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಶ್ರೀಗಂಧವನ್ನು ರಾಜ್ಯದ ಸ್ವತ್ತು ಎಂದೇ ಪರಿಗಣಿಸಲಾಗುತ್ತದೆ. ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ಇವರು ಅಮಾನತ್ತುಪಡಿಸಿಕೊಂಡ ಮಾಲನ್ನು ಪರಿಶೀಲಿಸಿ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಮಾಲು ಶ್ರೀಗಂಧವೇ ಎಂದು ದೃಢೀಕರಿಸಿ ಪತ್ರವನ್ನು ನೀಡಿರುತ್ತಾರೆ. ಆದ ಪ್ರಯುಕ್ತ ಈ ಅಂಶವನ್ನು ಸಮರ್ಥಿಸಲಾಗಿದೆ.

**ಅಂಶ - 3**

ಈ ಪ್ರಕರಣದಲ್ಲಿ ಅಂಬಾಸಿಡರ್ ಕಾರ್ ಸಂಖ್ಯೆ: ಕೆಎ-09-ಎಂ-2449 ಮಾಲೀಕರಾದ ಶ್ರೀ ತಿರುಮಲೇಶ್ ಇವರ ವಿಚಾರಣೆ ನಡೆಸಲಾಗಿ ಸದರಿಯವರಾಗಲಿ ಅಥವಾ ಸದರಿಯವರಿಂದ ವಾಹನವನ್ನು ವಶಕ್ಕೆ ಪಡೆದವರಾಗಲಿ ವಾಹನವು ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ಬಳಸದಂತೆ ಯಾವುದೇ ರೀತಿಯ ಮುಂಜಾಗ್ರತೆ ಕ್ರಮಗಳನ್ನು ತೆಗೆದುಕೊಂಡಿರುವುದು ಕಂಡು ಬರುವುದಿಲ್ಲ.

ಭಾರತೀಯ ಸಾಕ್ಷ್ಯಾಧಾರ ಅಧಿನಿಯಮ ಸೆಕ್ಷನ್ - 101 ಮತ್ತು 106 ರನ್ವಯ ಮತ್ತು ಕರ್ನಾಟಕ ಅರಣ್ಯ ಕಾಯ್ದೆ - 1963 ಸೆಕ್ಷನ್ 71(ಬಿ)(2) ರನ್ವಯ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರಿಗೆ ವಾಹನವು ಶ್ರೀಗಂಧದ ಸಾಗಾಣಿಕೆಯಲ್ಲಿ ಭಾಗಿಯಾಗಿಲ್ಲವೆಂಬುದನ್ನು ಸಾಬೀತುಪಡಿಸುವ ಜವಾಬ್ದಾರಿಯು ಇರುತ್ತದೆ. ಅಂಶ - 3 ಕ್ಕೆ ಸಂಬಂಧಿಸಿದಂತೆ ವಾಹನದ ಮಾಲೀಕರು ಅಥವಾ ಏಜೆಂಟರು ವಾಹನದ ದುರ್ಬಳಕೆಯ ಬಗ್ಗೆ ಮುಂಜಾಗರೂಕತಾ ಕ್ರಮ ತೆಗೆದುಕೊಂಡಿಲ್ಲದಿರುವುದು ಕಂಡು ಬಂದಿದೆ.

ಸರ್ಕಾರಿ ಅಭಿಯೋಗ ನಿರ್ದೇಶಕರ ಮತ್ತು ಆಪಾದಿತರ ಪರ ವಕೀಲರ ವಾದ, ವಿವಾದಗಳನ್ನು ಆಲಿಸಿದ ನಂತರ ವಾಹನವನ್ನು ಉದ್ದೇಶ ಪೂರ್ವಕವಾಗಿ ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ಬಳಸಲಾಗಿರುವುದು ಸಾಬೀತಾಗಿರುವುದರಿಂದ ಈ ಕೆಳಗಿನಂತೆ ಆದೇಶ ನೀಡಿದೆ.

**ಆದೇಶ**

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಜಿ.ಎಸ್. ಕರಿಯಪ್ಪ ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ - 1963 ರ ಸೆಕ್ಷನ್ - 71(ಎ) ಪ್ರಕಾರ ಪ್ರಸ್ತುತ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಅಂಬಾಸಿಡರ್ ಕಾರ್ ಸಂಖ್ಯೆ: ಕೆಎ-09-ಎಂ-2449 ಮತ್ತು ಅದರಲ್ಲಿ ಅಕ್ರಮವಾಗಿ ಸಾಗಿಸಲಾಗುತ್ತಿದ್ದ 17 ಕೆ.ಜಿ. ಶ್ರೀಗಂಧವನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಸದರಿ ವಾಹನ ಮತ್ತು ಶ್ರೀಗಂಧವು ಎಲ್ಲಾ ಋಣಭಾರಗಳಿಂದ ಮುಕ್ತವಾಗಿದೆ ಎಂದು ಘೋಷಿಸಿದ್ದೇನೆ.

ಈ ಆದೇಶವನ್ನು ದಿನಾಂಕ: 19.1.2004 ರಂದು ತೆರೆದ ನ್ಯಾಯಾಲಯದಲ್ಲಿ ನೀಡಲಾಗಿದೆ.

ಈ ಆದೇಶವನ್ನು ಹೊರಡಿಸಿದ 30 (ಮೂವತ್ತು) ದಿನಗಳೊಳಗೆ ಯಾವುದೇ ಅಹವಾಲು ಸ್ವೀಕೃತವಾಗದಿದ್ದಲ್ಲಿ ಈ ಆದೇಶವೇ ಅಂತಿಮ ಆದೇಶವಾಗಿರುತ್ತದೆ.

ಪಿ.ಆರ್. 566 ಅಧಿಕೃತ ಅಧಿಕಾರಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

## ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯದಲ್ಲಿ

**ನಂ. ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/163/1996-97, ದಿನಾಂಕ: 31ನೇ ಮಾರ್ಚ್ 2004**

**ಉಪಸ್ಥಿತರು:** ಶ್ರೀ ಕೆ.ಸಿ. ಹರಿದಾಸ್, ಕೆ.ಇ.ಎಸ್. ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

| **ಫಿರ್ಯಾದುದಾರರು:** | **ವಿರುದ್ಧ** | **ಅರ್ಜಿದಾರರು:** |
|---|---|---|
| ಪಿ.ಜಿ. ಭಾಟಿ, ಪೊಲೀಸ್ ಉಪ ನಿರೀಕ್ಷಕರು, ಅಪರಾಧ ವಿಭಾಗ, ಹೊನ್ನಾವರ. (ಮಾನ್ಯ ಸಹಾಯಕ ಅಭಿಯೋಜಕ ನಿರ್ದೇಶಕರು, ಕಾರವಾರ ರವರು ಪ್ರತಿನಿಧಿಸಿರುತ್ತಾರೆ) | | ವಾಲ್ಟರ್ ಶಾಂತಾ ಡಿಸೋಜಾ ಸಾ: ಪಾಳ್ಯಾ ರೋಡ್, ಹೊನ್ನಾವರ (ಶ್ರೀ ಎನ್.ಎಸ್. ಭಟ್, ವಕೀಲರು, ಕಾರವಾರ ಇವರು ಪ್ರತಿನಿಧಿಸಿರುತ್ತಾರೆ) |

**ತೀರ್ಪು**

ಈ ಆರೋಪಣಾ ಪಟ್ಟಿಯನ್ನು ಹೊನ್ನಾವರ ಪೊಲೀಸರು ಆರೋಪಿಯ ವಿರುದ್ಧ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 32 ಹಾಗೂ 34 ರಡಿಯಲ್ಲಿ ಸಲ್ಲಿಸಿ ಜಪ್ತಿಯಾದಂತಹ ಸ್ವತ್ತುಗಳನ್ನು ಕಲಂ 43 ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸಲ್ಲಿಸಿದ ಪ್ರಸ್ತಾವನೆಯಾಗಿರುತ್ತದೆ.

1. ಈ ಪ್ರಕರಣದ ಮುಖ್ಯ ಸಾರಾಂಶವೇನೆಂದರೆ, ದಿನಾಂಕ: 12.11.1996 ರಂದು ರಾತ್ರಿ 8.45 ಗಂಟೆಯ ಸಮಯಕ್ಕೆ ಗೇರಸೊಪ್ಪ ಕಡೆಯಿಂದ ಆಟೋರಿಕ್ಷಾದಲ್ಲಿ ಕಳ್ಳಭಟ್ಟಿಯಿಂದ ಸಾರಾಯಿ ಸಾಗಾಟ ಆಗುತ್ತಿದೆ ಅಂತಾ ಖಚಿತ ಬಾತ್ಮಿ ಬಂದ ಮೇರೆಗೆ ಫಿರ್ಯಾದುದಾರರು ತಮ್ಮ ಸಿಬ್ಬಂದಿ ಮತ್ತು ಪಂಚರನ್ನು ಕರೆದುಕೊಂಡು ಜೀಪಿನಲ್ಲಿ ಹೋಗಿ, ಜೀಪನ್ನು ಅರೊಳ್ಳಿಯ ರಸ್ತೆ ಬದಿಯಲ್ಲಿ ನಿಲ್ಲಿಸಿ, ಕತ್ತಲೆಯಲ್ಲಿ ಮರೆಯಲ್ಲಿ ನಿಂತು ಕಾಯುತ್ತಿದ್ದಾಗ, ಗೇರಸೊಪ್ಪ ಕಡೆಯಿಂದ ಒಂದು ರಿಕ್ಷಾ ಬಂದಿದ್ದನ್ನು ನೋಡಿ, ಕೈಸನ್ನೆ ಮಾಡಿ ನಿಲ್ಲಿಸಿದಾಗ ಅದರ ಚಾಲಕ ರಿಕ್ಷಾವನ್ನು ನಿಲ್ಲಿಸಿ ಓಡಲು ಶುರುಮಾಡಿದನೆಂದೂ, ಕೂಡಲೇ ಆತನನ್ನು ಬೆನ್ನಟ್ಟಿ ಆತನ ಹೆಸರು ಕೇಳಲಾಗಿ ಅನಿಲ್ ಡುಮ್ಮಿಂಗ್ ಡಿಸೋಜಾ ಅಂತಾ ಹೇಳಿದನೆಂದೂ, ಆತನು ನಡೆಸಿಕೊಂಡು ಬಂದಿದ್ದ ರಿಕ್ಷಾವನ್ನು ಪಂಚರ ಸಮಕ್ಷಮ ಪರಿಶೀಲಿಸಿದಾಗ, ಸದರಿ ರಿಕ್ಷಾ ನಂ. ಸಿಟಿಇ-3281 ರ ಹಿಂಬದಿಯ ಸೀಟಿನ ಮೇಲೆ 4 ರಟ್ಟಿನ ಪೆಟ್ಟಿಗೆಯಲ್ಲಿ ಪ್ರತಿಯೊಂದರಲ್ಲಿ ತಲಾ 180 ಮಿ.ಲೀ.ನ ಸಾರಾಯಿ ತುಂಬಿದ 48 ಬಾಟ್ಲಿಗಳಂತೆ ಇದ್ದವೆಂದೂ, ಅವುಗಳನ್ನು ಪಂಚರ ಸಮಕ್ಷಮ ಜಪ್ತು ಮಾಡಿ ರಾಸಾಯನಿಕ ಪರೀಕ್ಷೆಗಾಗಿ ಸ್ಯಾಂಪಲನ್ನು ಪ್ರತ್ಯೇಕ 4 ಬಾಟ್ಲಿಗಳಲ್ಲಿ ತೆಗೆದುಕೊಂಡು ಆರೋಪಿಯ ತಾಬಾದಲ್ಲಿ ಅವುಗಳನ್ನು ಹೊಂದಿರಲು ಯಾವುದೇ ಪಾಸ ಅಥವಾ ಪರ್ಮಿಟ್ ಇಲ್ಲದೇ ಇದ್ದುದರಿಂದ ಆರೋಪಿಯನ್ನು ಮತ್ತು ಜಪ್ತಾದ ಮಾಲನ್ನು ಠಾಣೆಗೆ ತಂದು ಫಿರ್ಯಾದನ್ನು ಸರ್ಕಾರದ ಪರವಾಗಿ ದಾಖಲುಪಡಿಸಿಕೊಂಡು, ಹೊನ್ನಾವರ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ: 462/96 ದಿನಾಂಕ: 12.11.1996 ರಂತೆ ಪ್ರಕರಣಕ್ಕೆ ಸಂಬಂಧಿಸಿದ ಪ್ರ.ಮಾ. ವರದಿ, ಪಂಚನಾಮೆ ಮತ್ತು ರಾಸಾಯನಿಕ ವಿಶ್ಲೇಷಣಾ ವರದಿಯ ಪ್ರತಿಗಳನ್ನು ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

2. ಫಿರ್ಯಾದುದಾರರು ಸಲ್ಲಿಸಿದ ದಾಖಲೆಗಳನ್ನಾಧರಿಸಿ ಪ್ರಕರಣದ ಆರೋಪಿಯಾದ ಅನಿಲ ತಂದೆ ಡುಮ್ಮಿಂಗ್ ಡಿಸೋಜಾ ಸಾ: ತಗ್ಗುಪಾಳ್ಯಾ, ಹೊನ್ನಾವರ ಇವರಿಗೆ ಸಂಖ್ಯೆ: ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/163/1996-97, ದಿನಾಂಕ: 21.11.1996 ರಂತೆ ಈ ಪ್ರಕರಣದಲ್ಲಿ ಜಪ್ತಿಯಾದಂತಹ ಸ್ವತ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕಾಗಿ ಕಾರಣ ಕೇಳಿ

ನೋಟೀಸನ್ನು ಕ.ಅ. ಕಾಯ್ದೆ ಕಲಂ 43 ಬಿ(1) ಎ ಪ್ರಕಾರ ನೀಡಲಾಗಿ ಅದನ್ನು ಅವರಿಗೆ ದಿ: 3.12.1996 ರಂದು ತನಿಖಾಧಿಕಾರಿಗಳು ಜಾರಿ ಮಾಡಿರುತ್ತಾರೆ. ಆದರೆ ಸದರಿ ಆರೋಪಿತರು ಈ ಕಾರಣ ಕೇಳಿ ನೋಟೀಸಿಗೆ ತನ್ನ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ.

3. ದಿನಾಂಕ: 20.11.1996 ರಂದು ಶ್ರೀ ಎನ್.ಎಸ್. ಭಟ್, ವಕೀಲರು, ಕಾರವಾರ ಇವರು ಜಪ್ತಿಯಾದ ವಾಹನದ ದಾಖಲೆಗಳ ನಕಲಿನೊಂದಿಗೆ ಈ ಪ್ರಾಧಿಕಾರದಲ್ಲಿ ಅರ್ಜಿ ಸಲ್ಲಿಸುತ್ತಾ, ವಾಹನವು ವಾಲ್ಟರ್ ಶಾಂತಾ ಡಿಸೋಜಾ ಸಾ: ಹೊನ್ನಾವರ ಇವರ ಮಾಲೀಕತ್ವದಾಗಿದ್ದು, ಇದನ್ನು ಮಧ್ಯಂತರ ಬಿಡುಗಡೆ ಮಾಡಬೇಕೆಂದು ಕೋರಿಕೊಂಡಾಗ ಸದರಿ ವಾಹನದ ಮಾಲೀಕರಿಗೆ ದಿನಾಂಕ: 20.12.1996 ರಂದು ಈ ಪ್ರಾಧಿಕಾರದಿಂದ ಕಾರಣ ಕೇಳಿ ನೋಟೀಸನ್ನು ಜಾರಿ ಮಾಡಿಸಲಾಗಿ, ಸದರಿ ಅರ್ಜಿದಾರರು ಕಾರಣ ಕೇಳಿ ನೋಟೀಸಿಗೆ ತನ್ನ ಸಮಜಾಯಿಷಿಯನ್ನು ಸಲ್ಲಿಸುತ್ತಾ, ತನ್ನ ಮೇಲೆ ಹೊರಿಸಲಾಗಿರುವ ಆರೋಪವನ್ನು ಅಲ್ಲಗಳೆದಿರುತ್ತಾರೆ.

4. ಈ ಪ್ರಾಧಿಕಾರದ ಆದೇಶ ಸಂಖ್ಯೆ: ಅಬಕಾರಿ/ಸಿಆರ್ಎಂ/ಡಿಟಿಸಿಆರ್/163/1996-97, ದಿನಾಂಕ: 20.12.1996 ರಂತೆ ರೂ. 13,000/- ಗಳ ಬ್ಯಾಂಕ್ ಗ್ಯಾರಂಟಿಯನ್ನು ಪಡೆದು ವಾಹನವನ್ನು ಅರ್ಜಿದಾರರಿಗೆ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲಾಗಿರುತ್ತದೆ.

5. ಪ್ರಕರಣದ ತನಿಖಾಧಿಕಾರಿಗಳು ದಿನಾಂಕ: 31.12.1997 ರಂದು ಈ ಪ್ರಾಧಿಕಾರಕ್ಕೆ ರಾಸಾಯನಿಕ ವಿಶ್ಲೇಷಣಾ ವರದಿಯ ನಕಲನ್ನು ಮುಂದಿನ ಕ್ರಮಕ್ಕಾಗಿ ಸಲ್ಲಿಸಿರುತ್ತಾರೆ. ರಾಸಾಯನಿಕ ವಿಶ್ಲೇಷಣಾ ವರದಿಯ ಪ್ರಕಾರ ಮಾದರಿ ಸೀಸೆಗಳಲ್ಲಿ ಆಲ್ಕೋಹಾಲ್ ಪತ್ತೆಯಾಗಿದ್ದು, ಅದರಲ್ಲಿಯ ಮದ್ಯಸಾರದ ಅಂಶವು ಶೇ. 34.05 ವಿ.ವಿ. ಯಷ್ಟು ಇದ್ದು, ಇದು ಮಾನವ ಸೇವನೆಗೆ ಯೋಗ್ಯವಾಗಿರುವುದಿಲ್ಲವಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ.

6. ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ ವಾಹನದ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 ಬಿ(1)ಸಿ ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಯ ಪ್ರತಿಗಳನ್ನು ಸಿಆರ್ಪಿಸಿ ಕಲಂ 207 ರಂತೆ ಅರ್ಜಿದಾರರಿಗೆ ನೀಡಲಾಯಿತು. ನಂತರ ಕಲಂ 32 ಮತ್ತು 34 ರಂತೆ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ ಅರ್ಜಿದಾರರು ತನ್ನ ಮೇಲೆ ಹೊರಿಸಿದ ಆರೋಪಗಳನ್ನು ಅಲ್ಲಗಳೆದಾಗ ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿಡಬ್ಲ್ಯೂ 1 ರಿಂದ 3ರ ವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ, ನಿಶಾನೆ ಪಿ. 1 ರಿಂದ 4 ರವರೆಗಿನ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ. ಪಂಚಸಾಕ್ಷಿದಾರರಿಬ್ಬರೂ ಪಿಡಬ್ಲ್ಯೂ 2 ಮತ್ತು ಪಿಡಬ್ಲ್ಯೂ 3 ರಂತೆ ಪ್ರತಿಕೂಲ ಸಾಕ್ಷಿಯನ್ನು ನುಡಿದಿರುತ್ತಾರೆ.

7. ಆದಾಗ್ಯೂ ಎದುರುದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡುಬಂದಿದ್ದರಿಂದ ದಂಡ ಪ್ರಕ್ರಿಯಾ ಸಂಹಿತೆ ಕಲಂ 313 ರಡಿಯಲ್ಲಿ ಅರ್ಜಿದಾರರ ಪರ ಹೇಳಿಕೆಯನ್ನು ಡಿ.ಡಬ್ಲ್ಯೂ 1 ರಂತೆ ನುಡಿಸಿ, ನಿಶಾನೆ ಡಿ-1 ನೇದನ್ನು ಗುರ್ತಿಸಿಕೊಳ್ಳಲಾಗಿದೆ.

8. ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರ ಹಾಗೂ ಅರ್ಜಿದಾರರ ಪರವಾಗಿ ಶ್ರೀ ವಿ.ಎಸ್. ಭಾಗವತ, ವಕೀಲರು ಕಾರವಾರರವರು ಮಂಡಿಸಿದ ವಾದ ವಿವಾದಗಳನ್ನು ಆಲಿಸಲಾಯಿತು. ಉಭಯತರ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡು ಬಂತು.

9. 1. ಹೊನ್ನಾವರ ತಾಲ್ಲೂಕು ಆರೋಳ್ಳಿಯಲ್ಲಿ ದಿನಾಂಕ: 12.11.1996 ರಂದು ರಾತ್ರಿ 8.45 ಗಂಟೆಯ ಸಮಯದಲ್ಲಿ ಆಟೋರಿಕ್ಷಾ ನಂ. ಸಿಟಿಇ-3281 ನೇದರಲ್ಲಿ ಯಾವುದೇ ಪಾಸ ಅಥವಾ ಪರ್ಮಿಟ್ ಇಲ್ಲದೇ ಅನಧಿಕೃತವಾಗಿ ನಂ. 1 ಡಾಕ್ಟರ್ ಫೈನ್ ಬ್ರಾಂದಿ ಬಾಟ್ಲಿಗಳು 48 ರಂತೆ 4 ಬಾಕ್ಸ್‌ಗಳಲ್ಲಿ ಇಟ್ಟುಕೊಂಡು ಸಾಗಾಟ ಮಾಡುತ್ತಿದ್ದಾಗ ಸಿಕ್ಕಿಬಿದ್ದು ಕರ್ನಾಟಕ ಅಬಕಾರಿ ಕಾಯ್ದೆ 32 ಹಾಗೂ 34 ರಡಿ ಶಿಕ್ಷಾರ್ಹ ಅಪರಾಧ ಮಾಡಿದ್ದಾರೆಂದು ಅಭಿಯೋಜನೆಯವರು ರುಜುವಾತುಪಡಿಸುತ್ತಾರೆಯೇ, ಹೇಗೆ?

2. ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಈ ವಾಹನಗಳಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ?

3. ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ?

10. ಅಂಶ 1 : ಸಕಾರಾತ್ಮಕವಾಗಿ

ಅಂಶ 2 : ನಕಾರಾತ್ಮಕವಾಗಿ

ಅಂಶ 3 : ಸಕಾರಾತ್ಮಕವಾಗಿ

### ಕಾರಣಗಳು

11. ಒಂದನೆಯ ವಿವಾದಾಂಶವನ್ನು ರುಜುವಾತುಪಡಿಸಲು ಅಭಿಯೋಜಕರ ಪರ ಮುಖ್ಯ ಸಾಕ್ಷಿದಾರರಾದ ಪ್ರಕರಣದ ಫಿರ್ಯಾದಿ ಪಿ.ಜಿ. ಭಾಟಿ, ಪಿ.ಎಸ್.ಐ ರವರು ಈ ಪ್ರಾಧಿಕಾರದಲ್ಲಿ ದಿನಾಂಕ: 13.12.2000 ರಂದು ಹಾಜರಾಗಿ ತನ್ನ ಸಾಕ್ಷಿಯನ್ನು ನುಡಿಯುತ್ತಾ, ಮಾನ್ಯ ಎಡಿಪಿಯವರ ಮುಖ್ಯ ವಿಚಾರಣೆಗೆ ಉತ್ತರಿಸುತ್ತಾ, ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರು ಮಾಡಿದ ಪಾಟಿ ಸವಾಲಿನಲ್ಲಿ ವಾಹನವನ್ನು ಜಪ್ತು ಮಾಡುವ ಪೂರ್ವದಲ್ಲಿ ನ್ಯಾಯಾಲಯದಿಂದ ಪರವಾನಿಗೆ ಪಡೆಯಲು ಕಾಲಾವಕಾಶ ಇರಲಿಲ್ಲವೆಂದೂ, ಸ್ಟೇಶನ್ ಬಿಟ್ಟ ಬಗ್ಗೆ ಡೈರಿಯನ್ನು ಹಾಜರುಪಡಿಸಿಲ್ಲವೆಂದೂ, ಈ ಪ್ರಕರಣದಲ್ಲಿ ತಾನೇ ಫಿರ್ಯಾದಿ ಎನ್ನುವುದು ಸರಿಯೆಂದೂ, ಪ್ರಕರಣದ ತನಿಖೆಯನ್ನು ಬೇರೆ ಅಧಿಕಾರಿಗೆ ವಹಿಸಿಕೊಡಲು ತೊಂದರೆ ಇರಲಿಲ್ಲವೆನ್ನುವುದು ಸರಿಯೆಂದು, ಅದರ ಅವಶ್ಯಕತೆ ಇರಲಿಲ್ಲವೆಂದೂ, ದಾಖಲೆಗಳನ್ನು ವಿಳಂಬ ಮಾಡಿ ಸಲ್ಲಿಸಿಲ್ಲವೆಂದೂ, ಹೊನ್ನಾವರ ಜೆ.ಎಂ.ಎಫ್.ಸಿ. ನ್ಯಾಯಾಲಯದ ಸಿ.ಸಿ. ನಂ. 802/97 ರಲ್ಲಿ ಗುನ್ಹೆಯಲ್ಲಿನ ಆರೋಪಿತರು ನಿರ್ದೋಷಿ ಎಂದು ನಿರ್ಣಯ ಹೊರಡಿಸಿರುವುದು ಸರಿಯೆಂದು,

ಘಟನಾ ಸ್ಥಳದ ಸುತ್ತಮುತ್ತಲು ಮನೆಗಳಿವೆ ಅನ್ನುವುದು ನಿಜವೆಂದು, ರಸ್ತೆ ಮೇಲೆ ಗಾಡಿಗಳು ಓಡಾಡುವುದು ನಿಜವೆಂದು ಘಟನಾ ಸ್ಥಳದಲ್ಲಿ ಅನಿಲ ಎಂಬುವವರನ್ನು ಹಿಡಿದಿಲ್ಲ ಅನ್ನುವುದು ಸರಿಯಲ್ಲವೆಂದು ಅಂಕೆ-ಸಂಖ್ಯೆಗೋಸ್ಕರ ಸುಳ್ಳು ಪ್ರಕರಣ ದಾಖಲು ಮಾಡಿದ್ದೇವೆನ್ನುವುದು ಸರಿಯಲ್ಲವೆಂದು ನುಡಿದಿರುತ್ತಾರೆ.

12. **ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-** ಕರ್ನಾಟಕ ಅಬಕಾರಿ ಕಾಯ್ದೆಯಲ್ಲಿನ ಪ್ರಕರಣವನ್ನು ಪತ್ತೆ ಹಚ್ಚುವ ಸಮಯದಲ್ಲಿ ಆರೋಪಿಯು ತಪ್ಪಿಸಿಕೊಳ್ಳುವ ಸಂದರ್ಭವಿದ್ದಲ್ಲಿ, ಮತ್ತು ಮುದ್ದೆ ಮಾಲುಗಳನ್ನು ಬೇರೆಡೆಗೆ ಸಾಗಿಸಬಹುದೆಂಬ ಅನುಮಾನವಿದ್ದಾಗ ಘನ ನ್ಯಾಯಾಲಯದಿಂದ ಸರ್ಚ್ ವಾರಂಟನ್ನು ಪಡೆಯಲು ಸಾಧ್ಯವಾಗದಿದ್ದ ಸಂದರ್ಭದಲ್ಲಿ ಜಪ್ತು ಮತ್ತು ದಸ್ತಗಿರಿಯ ಕ್ರಮವನ್ನು ಜರುಗಿಸಲು ಅನ್ವೇಷಣಾಧಿಕಾರಿಗೆ ಕಲಂ 52 ರಲ್ಲಿ ಅಧಿಕಾರವಿರುತ್ತದೆ. ಸ್ಟೇಷನ್ ಬಿಟ್ಟ ಬಗ್ಗೆ ಡೈರಿಯನ್ನು ಹಾಜರುಪಡಿಸಲು ಸದರಿ ಸಾಕ್ಷಿದಾರರಿಗೆ ಸೂಚಿಸಿ ಅವಕಾಶವನ್ನು ನೀಡಲು ಕೇಳಬೇಕಾಗಿತ್ತೇ ಹೊರತು ಸಾಕ್ಷಿ ನುಡಿಯಲು ಬಂದಾಗ ಅದನ್ನು ಕೇಳುವುದು ಸರಿಯೆಂದು ಕಂಡು ಬರುವುದಿಲ್ಲ. ಕಲಂ 43ಎ(2)ರ ಪ್ರಕಾರ ಕ್ರಿಮಿನಲ್ ನ್ಯಾಯಾಲಯದಲ್ಲಿ ಯಾವುದೇ ರೀತಿಯ ಫಲಿತಾಂಶವಾದರೂ ಗುನ್ಹೆಯಲ್ಲಿ ಜಪ್ತಿಯಾದಂತಹ ಸ್ವತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುತ್ತದೆ. ಘಟನಾ ಸ್ಥಳದ ಅಕ್ಕಪಕ್ಕದಲ್ಲಿ ಮನೆಗಳಿದ್ದರೂ ಫಿರ್ಯಾದುದಾರರು ಕರೆದುಕೊಂಡು ಹೋದಂತಹ ಪಂಚರುಗಳು ಸಹ ಸ್ವತಂತ್ರ ಪಂಚರಾಗಿರುವುದರಿಂದ ಬೇರೆ ಪಂಚರನ್ನು ಪಡೆಯುವ ಅವಶ್ಯಕತೆ ಕಂಡು ಬರುವುದಿಲ್ಲ. ಘಟನಾ ಸ್ಥಳದಲ್ಲಿ ಅನಿಲ ಎಂಬುವವನ್ನು ದಸ್ತಗಿರಿ ಮಾಡದೇ ಇದ್ದಲ್ಲಿ ಆತನನ್ನು ಎಲ್ಲಿ ದಸ್ತಗಿರಿ ಮಾಡಿದರೆಂಬ ಬಗ್ಗೆ ಎದುರುದಾರರ ಪಕ್ಷದವರು ವಿವರಿಸಿಲ್ಲ. ಆರೋಪಿಯನ್ನು ದಸ್ತಗಿರಿ ಮಾಡಿ ಜಾಮೀನಿನ ಮೇಲೆ ಬಿಡುಗಡೆ ಮಾಡಿರುವ ಬಗ್ಗೆ ದಾಖಲೆಗಳಿರುವಾಗ ಆತನನ್ನು ದಸ್ತಗಿರಿ ಮಾಡಿಲ್ಲ ಎಂಬ ಬಗ್ಗೆ ಬಲವಾದ ಕಾರಣಗಳು ಇರುವುದಿಲ್ಲ. ಅಂಕೆ ಸಂಖ್ಯಾಗೋಸ್ಕರ ಪ್ರಕರಣವನ್ನು ದಾಖಲಿಸುವುದಾದಲ್ಲಿ ಇದೇ ಆರೋಪಿಯ ಮೇಲೆ ಏಕೆ ದಾಖಲಿಸಿದವರು ಮತ್ತು ಜಪ್ತಿಯಾದಂತಹ ನಾಲ್ಕು ಪೆಟ್ಟಿಗೆ ಮದ್ಯವನ್ನು ಫಿರ್ಯಾದಿ ಕಡೆಯವರು ಎಲ್ಲಿಂದ ತಂದರು ಎಂಬ ಬಗ್ಗೆಯೂ ವಿವರಿಸಿರುವುದಿಲ್ಲ.

13. ಈ ಪ್ರಕರಣದ ಪಂಚಸಾಕ್ಷಿ ನಂ. 1 ನೇಯವರಾದ ಮೋಹನ ಮುಕುಂದ ಪಡ್ತಿ ಇವರು ಈ ಪ್ರಾಧಿಕಾರದಲ್ಲಿ ದಿನಾಂಕ: 1.8.2001 ರಂದು ಹಾಜರಾಗಿ ಮಾನ್ಯ ಎಡಿಪಿ ಯವರ ಮುಖ್ಯ ವಿಚಾರಣೆಯಲ್ಲಿ ತನ್ನ ಸಮಕ್ಷಮ ಯಾವುದೇ ಪಂಚನಾಮೆಯನ್ನು ಮಾಡಿಲ್ಲವೆಂದು ನುಡಿದರೂ ಪಾಟೀಸವಾಲಿನಲ್ಲಿ ಸ್ಥಳದಲ್ಲಿ ಪಂಚನಾಮೆ ಮಾಡಿ ಓದಿ ಹೇಳಿ ಸಹಿ ತೆಗೆದುಕೊಂಡಿದ್ದಾರೆ ಎನ್ನುವುದು ಸುಳ್ಳೆಂದು ಆರೋಪಿಗೆ ಸಹಾಯವಾಗಲೆಂದು ಸುಳ್ಳು ಸಾಕ್ಷಿ ನುಡಿಯುತ್ತಿದ್ದೇನೆ ಎನ್ನುವುದು ಸರಿಯಲ್ಲವೆಂದು ನುಡಿದಿರುತ್ತಾರೆ.

14. **ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-** ಸದರಿ ಸಾಕ್ಷಿಯು ತಾನು ಕನ್ನಡದಲ್ಲಿ ಸಹಿ ಮಾಡುತ್ತೇನೆ ಎಂಬುದನ್ನು ಒಪ್ಪಿಕೊಂಡಿದ್ದುದನ್ನು ಗಮನಿಸಿದಾಗ ಇವರಿಗೆ ಕನ್ನಡ ಭಾಷೆಯ ಅರಿವಿದ್ದುದು ಸ್ಪಷ್ಟವಾಗುತ್ತದೆ. ಅಲ್ಲದೇ ಅವರು ತನ್ನ ಸಹಿಯನ್ನು ಸಹ ಕನ್ನಡದಲ್ಲಿಯೇ ಮಾಡಿರುತ್ತಾರೆ ಆದರೆ ತನ್ನ ಸಹಿಯನ್ನು ಅಲ್ಲಗಳೆದಿರುವುದಿಲ್ಲ ಹಾಗೂ ಸುಳ್ಳು ಪಂಚನಾಮೆಯನ್ನು ತಯಾರಿಸಿದ್ದಲ್ಲಿ ಅದಕ್ಕೆ ತಾನೇಕೆ ಸಹಿ ಮಾಡಿದೆ ಎಂಬ ಬಗ್ಗೆ ವಿವರಿಸಿರುವುದಿಲ್ಲದಿದ್ದುದನ್ನು ಗಮನಿಸಿದಾಗ ಸದರಿ ಸಾಕ್ಷಿಯು ನಿಜ ನುಡಿದಿಲ್ಲವೆನ್ನುವುದು ಕಂಡುಬರುತ್ತದೆ.

15. ಅದೇ ರೀತಿ ಈ ಪ್ರಕರಣದ ಪಂಚ ಸಾಕ್ಷಿ ನಂ. 2 ನೇಯವರಾದ ಈಶ್ವರ ಥಾಕು ಹರಿಕಂತ್ರ ಇವರು ಪಿ.ಡಬ್ಲ್ಯೂ 3 ರಂತೆ ತನ್ನ ಸಾಕ್ಷ್ಯವನ್ನು ದಿನಾಂಕ: 19.3.2003 ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ನುಡಿಯುತ್ತಾ, ಮಾನ್ಯ ಎಡಿಪಿಯವರ ಮುಖ್ಯ ವಿಚಾರಣೆಯಲ್ಲಿ ಪಂಚನಾಮೆಯಲ್ಲಿ ಬರೆದ ವಿಷಯವು ತನಗೆ ಗೊತ್ತಿರುವುದಿಲ್ಲವೆಂದು ನಂತರ ಪಾಟೀ ಸವಾಲಿನಲ್ಲಿ ಸದರ ಪಂಚನಾಮೆಗೆ ತಾನು ಸಹಿ ಮಾಡಿದ್ದೇನೆ ಎನ್ನುವುದು ಸುಳ್ಳೆಂದು ನಂತರ ಅರ್ಜಿದಾರರ ಪರ ವಕೀಲರು ಪಾಟೀ ಸವಾಲಿನಲ್ಲಿ ಪೊಲೀಸರು ತನ್ನ ಗಾಡಿಗೆ ಕೇಸು ಹಾಕುತ್ತೇನೆ ಎಂದು ಹೆದರಿಸಿ ಸಹಿ ಹಾಕು ಎಂದಿದ್ದಕ್ಕೆ ಸಹಿ ಹಾಕಿದ್ದೇನೆಂದು ನುಡಿದಿರುತ್ತಾರೆ.

16. **ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-** ಸದರಿ ಸಾಕ್ಷಿದಾರರು ಮಾನ್ಯ ಎಡಿಪಿ ಯವರ ಪಾಟೀ ಸವಾಲಿನಲ್ಲಿ ಪಂಚನಾಮೆಗೆ ತಾನು ಸಹಿ ಮಾಡಿದ್ದೇನೆ ಎನ್ನುವುದು ಸುಳ್ಳೆಂದು ನುಡಿದು ಎದುರುದಾರರ ವಕೀಲರ ಪರ ಪಾಟೀ ಸವಾಲಿನಲ್ಲಿ ಪೊಲೀಸರು ಹೆದರಿಸಿ ಸಹಿ ಹಾಕು ಎಂದಿದ್ದಕ್ಕೆ ಸಹಿ ಹಾಕಿದ್ದೇನೆ ಎಂದು ನುಡಿದುದ್ದನ್ನು ಗಮನಿಸಿದಾಗ ಸದರಿಯವರ ಹೇಳಿಕೆಯು ಒಂದಕ್ಕೊಂದು ತಾಳೆಯಾಗದೇ ಮಾನ್ಯ ಎಡಿಪಿಯವರ ಪಾಟೀ ಸವಾಲಿನಲ್ಲಿ ನುಡಿದಂತೆ ಈ ಸಾಕ್ಷಿದಾರರ ಆದಾಯದಿಂದ ಅವರ ಜೀವನ ನಡೆಸುವುದು ಸಾಧ್ಯವಾಗದಿದ್ದುದರಿಂದ ಅರ್ಜಿದಾರರ ಕಡೆಯಿಂದ ಹಣ ಪಡೆದು ಸುಳ್ಳು ಸಾಕ್ಷಿ ನುಡಿದಿರುವುದಕ್ಕೆ ಪುಷ್ಟಿ ದೊರೆತಂತಾಗಿದೆ.

17. ಈ ಎಲ್ಲಾ ಕಾರಣಗಳಿಂದ ಅಭಿಯೋಜನೆ ಪಕ್ಷದವರು ಘಟನೆ ಸಂಭವಿಸಿರುವುದನ್ನು ನಿಸ್ಸಂಶಯವಾಗಿ ರೂಪಿಸಿರುವುದು ಕಂಡುಬರುವುದರಿಂದ ಮೊದಲನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸಲಾಗಿದೆ.

18. ಅರ್ಜಿದಾರರಾದಂತಹ ವಾಲ್ಟರ್ ಶಾಂತಾ ಡಿಸೋಜಾ ಇವರು ಈ ಪ್ರಾಧಿಕಾರದಲ್ಲಿ ದಿನಾಂಕ: 28.1.2004 ರಂದು ಹಾಜರಾಗಿ ತನ್ನ ಪರ ವಕೀಲರ ಮುಖ್ಯ ವಿಚಾರಣೆಗೆ ಡಿಡಬ್ಲ್ಯೂ 1 ರಂತೆ ಉತ್ತರಿಸುತ್ತಾ, ತನ್ನ ವಾಹನವನ್ನು ನಡೆಸುವುದಕ್ಕಾಗಿ ಡ್ರೈವರನನ್ನು ನೇಮಿಸಿದ್ದೇನೆಂದೂ, ವಾಹನವು ಗೇರಸೊಪ್ಪಾ ಕಡೆಗೆ ಹೋಗಿರಲಿಲ್ಲವೆಂದೂ, ರಿಕ್ಷಾವನ್ನು ಹೊನ್ನಾವರ ನಗರದಲ್ಲಿ ಮಾತ್ರ ಉಪಯೋಗಿಸುತ್ತೇನೆಂದೂ, ತನಗೆ ನೀಡಿದ ನೋಟೀಸಿನಲ್ಲಿ ಎಲ್ಲಿ ಜಪ್ತಿ ಮಾಡಿದರು ಮತ್ತು ಯಾವಾಗ ಜಪ್ತು ಮಾಡಿದರು ಎಂಬುದನ್ನು ವಿವರಿಸಲಿಲ್ಲವೆಂದೂ, ರಿಕ್ಷಾವನ್ನು ಪ್ರಯಾಣಿಕರ ಸಾಗಾಟಕ್ಕಾಗಿ ಮಾತ್ರ ಉಪಯೋಗಿಸಲು ಡ್ರೈವರನಿಗೆ ಕೊಟ್ಟಿದ್ದೇನೆಂದೂ, ಡ್ರೈವರನು ತಮ್ಮ ಖಾಯಂ ಡ್ರೈವರ್ ಆಗಿರಲಿಲ್ಲವೆಂದೂ, ಅವನಿಗೆ ನೇಮಿಸಿದಾಗ ಅಕ್ರಮ ವಸ್ತುಗಳನ್ನು ಸದರಿ ರಿಕ್ಷಾದಲ್ಲಿ ಸಾಗಿಸಬಾರದೆಂದೂ ತಿಳಿಹೇಳಿದ್ದೇನೆಂದೂ ನುಡಿದಿರುತ್ತಾರೆ. ನಂತರ ಮಾನ್ಯ ಎಡಿಪಿ ಯವರ ಪಾಟೀ ಸವಾಲಿನಲ್ಲಿ ಯಾವುದೇ ರೀತಿಯ ಅಕ್ರಮ ವಸ್ತುಗಳನ್ನು ಸಾಗಿಸಿದ್ದಲ್ಲಿ ಅದಕ್ಕೆ ಡ್ರೈವರನೇ ಜವಾಬ್ದಾರನಾಗುತ್ತಾನೆ ಎಂಬ ಬಗ್ಗೆ ಆತನಿಂದ ಯಾವುದೇ ಹೇಳಿಕೆಯನ್ನು ಬರವಣಿಗೆಯ ರೂಪದಲ್ಲಿ ಪಡೆದಿಲ್ಲವೆಂದೂ ಹಾಗೂ ದಿನಾಂಕ: 12.11.1996 ರಂದು ವಾಹನದ ಚಾಲಕ ಅನಿಲ ತಂದೆ ಡುಮಿಂಗ್ ಡಿಸೋಜಾ ಈತನೇ ಇದ್ದನೆಂದೂ

ತಾನು ಸ್ಟೇಷನಿಗೆ ಹೋದಾಗ ಸಾರಾಯಿ ಇರದಿದ್ದುದರಿಂದ ಈ ವಾಹನದಲ್ಲಿ ಸಾರಾಯಿ ಸಾಗಾಟ ಆಗಿಲ್ಲವೆಂದು ತಾನು ಹೇಳುತ್ತೇನೆಂದೂ ನುಡಿದಿರುತ್ತಾರೆ.

19. **ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-** ವಾಹನವು ಘಟನೆ ಸಂಭವಿಸಿದ ದಿನ ಗೆರಸೊಪ್ಪಾ ಕಡೆಗೆ ಹೋಗಿರದಿದ್ದಲ್ಲಿ ಆ ಸಮಯದಲ್ಲಿ ಯಾವ ಸ್ಥಳದಲ್ಲಿತ್ತು ಎಂಬುದನ್ನು ವಿವರಿಸಿಲ್ಲ. ಚಾಲಕನು ವಾಹನ ತೆಗೆದುಕೊಂಡು ಹೋದ ಬಗ್ಗೆ ಅರ್ಜಿದಾರರೇ ಒಪ್ಪಿಕೊಂಡಿರುತ್ತಾರೆ. ಪ್ರಾಧಿಕಾರದಿಂದ ನೀಡಲಾದ ನೋಟೀಸಿನಲ್ಲಿ ದಿನಾಂಕ ಮತ್ತು ಸಮಯವನ್ನು ನಮೂದಿಸಿರುವುದು ಕಂಡು ಬರುತ್ತದೆ. ಡ್ರೈವರನಿಗೆ ನೇಮಿಸುವಾಗ ಅಕ್ರಮ ವಸ್ತುಗಳನ್ನು ಸಾಗಿಸಬಾರದೆಂದು ತಿಳಿಸಿರುವ ಬಗ್ಗೆ ಯಾವುದೇ ಲಿಖಿತ ದಾಖಲೆಗಳನ್ನು ಹಾಜರುಪಡಿಸಿಲ್ಲ. ಹಾಗೇನಾದರೂ ಚಾಲಕನು ಅಕ್ರಮ ಸಾರಾಯಿ ಸಾಗಿಸಿಲ್ಲವೆನ್ನುವ ಬಗ್ಗೆ ಸಾಬೀತುಪಡಿಸುವುದಾದಲ್ಲಿ ಆತನ ಸಾಕ್ಷ್ಯವನ್ನು ನುಡಿಸಬಹುದಾಗಿತ್ತು. ಅಲ್ಲದೇ ಆ ಚಾಲಕನಿಗೆ ಪ್ರಾಧಿಕಾರದಿಂದ ನೀಡಿರುವ ನೋಟೀಸನ್ನು ಆತನು ಸ್ವೀಕರಿಸಿ ಅದಕ್ಕೆ ತನ್ನ ಪ್ರತ್ಯುತ್ತರವನ್ನು ನೀಡಿರುವುದಿಲ್ಲ. ಸ್ಟೇಷನಿಗೆ ಹೋದಾಗ ಸಾರಾಯಿ ಕಾಣದಿದ್ದ ಮಾತ್ರಕ್ಕೆ ಅದನ್ನು ಜಪ್ತು ಮಾಡಿಲ್ಲ ಎಂದು ಭಾವಿಸುವುದು ಸಮಂಜಸವಲ್ಲ. ಹೀಗಾಗಿ ಎರಡನೆಯ ವಿವಾದಾಂಶವನ್ನು ತೃಪ್ತಿಕರವಾಗಿ ನಿರೂಪಿಸಲು ಎದುರುದಾರರ ಪಕ್ಷದವರು ವಿಫಲರಾಗಿರುವ ಪ್ರಯುಕ್ತ ಎರಡನೆಯ ವಿವಾದಾಂಶವನ್ನು ನಕಾರಾತ್ಮಕವಾಗಿ ಉತ್ತರಿಸಲಾಗಿದೆ.

20. ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಈ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಿಸಿರುವುದು ಸಾಬೀತಾಗಿರುವುದರಿಂದ ಹಾಗೂ ಮಾನ್ಯ ಸೆಶನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 78/2000 ದಿನಾಂಕ: 7.11.2003 ರಂತೆ ಪ್ರಾಧಿಕಾರದ ಆದೇಶವನ್ನು ಎತ್ತಿ ಹಿಡಿದಿರುವುದರಿಂದ ಮೂರನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸುತ್ತಾ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ,

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಪ್ರಕಾರ ಅನುಸರಿಸಬೇಕಾದಂತಹ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43 ಎ(1) ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹೊನ್ನಾವರ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ: 462/1996, ದಿನಾಂಕ: 12.11.1996 ರಲ್ಲಿ ಜಪ್ತಿಯಾದಂತಹ ಆಟೋ ರಿಕ್ಷಾ ಸಂಖ್ಯೆ: ಸಿಟಿಇ-3281 ನೇದನ್ನು ಹಾಗೂ ಪ್ರತಿಯೊಂದರಲ್ಲಿ ತಲಾ 180 ಮಿ.ಲೀ.ನ 48 ಸೀಸೆಗಳಂತೆ ಇರುವ ಒಟ್ಟೂ 4 ಪೆಟ್ಟಿಗೆಗಳಲ್ಲಿನ 192 ನಂ. 1 ಫೈನ್ ಡಾಕ್ಟರ್ ಬ್ರಾಂಡಿಯ ಸೀಸೆಗಳನ್ನು ಕಲಂ 43 ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಮುಟ್ಟುಗೋಲು ಹಾಕಿಕೊಂಡ ಮದ್ಯವು ರಾಸಾಯನಿಕ ವಿಶ್ಲೇಷಣಾ ವರದಿಯಂತೆ ಮಾನವ ಸೇವನೆಗೆ ಅಯೋಗ್ಯವಿರುವುದರಿಂದ ಇದನ್ನು ಸಿ.ಪಿ.ಐ. ಹೊನ್ನಾವರ ರವರ ಸಮಕ್ಷಮ ಪಂಚನಾಮೆಯ ಮೂಲಕ ನಾಶಪಡಿಸಲು ಪಿ.ಎಸ್.ಐ. ಪೊಲೀಸ್ ಠಾಣೆ ಹೊನ್ನಾವರ ಇವರಿಗೆ ಕಲಂ 43 ಎ(3) ರನ್ವಯ ಆದೇಶಿಸಿದೆ. ಖಾಲಿ ಸೀಸೆಗಳನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ಅಬಕಾರಿ ನಿರೀಕ್ಷಕರು, ಹೊನ್ನಾವರ ವಲಯ ಇವರಿಗೆ ಕಲಂ 43ಎ (4) ರನ್ವಯ ಆದೇಶಿಸಿದೆ.

ವಾಹನಕ್ಕೆ ಸಂಬಂಧಿಸಿದಂತೆ ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

(ಈ ಆದೇಶವನ್ನು ಇಂದು ಅಂದರೆ 2004ನೇ ಇಸ್ವಿಯ ಮಾರ್ಚ್ ತಿಂಗಳ 31ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ ನಂತರ ಬೆರಳಚ್ಚು ಮಾಡಿಸಿ, ಬೆರಳಚ್ಚಿಸಿದ ಪ್ರತಿಯನ್ನು ತಿದ್ದಿದ ನಂತರ ಗಣಕೀಕೃತಗೊಳಿಸಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಕೆ.ಸಿ. ಹರಿದಾಸ್**
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ - 1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

| | |
|---|---|
| ಪ್ರಾ.ಸಾ. ನಂ. 1 | ಪುಂಡಲೀಕ ಗುರಪ್ಪ ಭಾಟಿ, ಪಿ.ಎಸ್.ಐ. |
| ಪ್ರಾ.ಸಾ. ನಂ. 2 | ಮೋಹನ ಮುಕುಂದ ಪಡ್ತಿ |
| ಪ್ರಾ.ಸಾ. ನಂ. 3 | ಈಶ್ವರ ಥಾಕು ಹರಿಕಂತ್ರ |

**ಅನುಬಂಧ - 2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

| | |
|---|---|
| ಡಿ.ಡಬ್ಲ್ಯೂ. 1 | ವಾಲ್ಟರ್ ಶಾಂತಾ ಡಿಸೋಜಾ |

**ಅನುಬಂಧ - 3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

| | |
|---|---|
| ನಿಶಾನೆ 1 | ಪ್ರ.ಮಾ. ವರದಿ |
| ನಿಶಾನೆ 1ಎ | ಪ್ರ.ಮಾ. ವರದಿಯ ಮೇಲಿನ ಸಹಿ |
| ನಿಶಾನೆ 2 | ಪಂಚನಾಮೆ |

| | |
|---|---|
| ನಿಶಾನೆ 2ಎ | ಪಂಚನಾಮೆ ಮೇಲಿನ ಸಹಿ |
| ನಿಶಾನೆ 3 | ಸ್ವತ್ತಿನ ಪಟ್ಟಿ |
| ನಿಶಾನೆ 3ಎ | ಸ್ವತ್ತಿನ ಪಟ್ಟಿಯ ಮೇಲಿನ ಸಹಿ |
| ನಿಶಾನೆ 4 | ರಾಸಾಯನಿಕ ವಿಶ್ಲೇಷಣಾ ವರದಿ |
| ನಿಶಾನೆ 4ಎ | ರಾಸಾಯನಿಕ ವಿಶ್ಲೇಷಣಾ ವರದಿಯ ಮೇಲಿನ ಸಹಿ |

**ಅನುಬಂಧ - 4**

**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

| | |
|---|---|
| ನಿಶಾನೆ ಡಿ1 | ಸಿ.ಸಿ. ನಂ. 802/97 ನೇದರ ತೀರ್ಪಿನ ನಕಲು |

**ಕೆ.ಸಿ. ಹರಿದಾಸ್**

ಪಿ.ಆರ್. 567

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯದಲ್ಲಿ**

**ನಂ. ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/154/2001-02, ದಿನಾಂಕ: 31ನೇ ಮಾರ್ಚ್ 2004**

**ಉಪಸ್ಥಿತರು:** ಶ್ರೀ ಕೆ.ಸಿ. ಹರಿದಾಸ್, ಕೆ.ಇ.ಎಸ್. ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದಿ:**
ಜಿ.ಎಫ್. ನಾಯ್ಕ, ಪೊಲೀಸ್ ಉಪ ನಿರೀಕ್ಷಕರು,
ಗ್ರಾಮೀಣ ಪೊಲೀಸ್ ಠಾಣೆ, ಭಟ್ಕಳ
(ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು,
ಕಾರವಾರರವರು ಪ್ರತಿನಿಧಿಸಿರುತ್ತಾರೆ)

**ವಿರುದ್ಧ**

**ಅರ್ಜಿದಾರರು:**
ನಜೀರ ಶೇಖ ತಂದೆ ಮೊಹಿದ್ದೀನ್ ಶೇಖ್,
ಸಾ: ಆಜಾದನಗರ. ಹೊನ್ನಾವರ.
(ಶ್ರೀ ವಿ.ಎಸ್. ಭಾಗವತ, ವಕೀಲರು, ಕಾರವಾರ
ರವರು ಪ್ರತಿನಿಧಿಸಿರುತ್ತಾರೆ)

**ತೀರ್ಪು**

1. ಈ ಆರೋಪವನ್ನು ಕ.ಅ. ಕಾಯ್ದೆ ಕಲಂ 34 ರಂತೆ ಹೊರಿಸಿದ್ದು, ಜಪ್ತಿಯಾದ ಸ್ವತ್ತುಗಳನ್ನು ಕಲಂ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ಸಲ್ಲಿಸಿದ ಪ್ರಸ್ತಾವನೆಯಾಗಿರುತ್ತದೆ.

2. ದಿನಾಂಕ: 22.12.2001 ರಂದು ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಗ್ರಾಮೀಣ ಪೊಲೀಸ್ ಠಾಣೆ ಭಟ್ಕಳ ಇವರು ರಾತ್ರಿ 22-25 ಗಂಟೆಗೆ ಪೊಲೀಸ್ ಠಾಣೆಯಲ್ಲಿದ್ದಾಗ ಖಚಿತವಾದ ವರ್ತಮಾನದ ಮೇರೆಗೆ ತನ್ನ ಸಿಬ್ಬಂದಿಗಳು ಮತ್ತು ಇಬ್ಬರು ಪಂಚರೊಂದಿಗೆ ಸರ್ಕಾರಿ ಪೊಲೀಸ್ ಜೀಪ್ ಸಂಖ್ಯೆ: ಸಿಎಜಿ-9610 ನೇದರ ಮೇಲೆ ಶಿರಾಲಿ ತರ್ಫಗೆ ಹೊರಟು ಸಿಂಡಿಕೇಟ್ ಬ್ಯಾಂಕಿನ ಮುಂದಿನ ರಸ್ತೆಯ ಪಕ್ಕದಲ್ಲಿನ ರಸ್ತೆಯಲ್ಲಿ ಜೀಪನ್ನು ಇಟ್ಟು ಮರೆಯಾಗಿ ನಿಂತು, ಬರುಹೋಗುವ ವಾಹನಗಳನ್ನು ನಿರೀಕ್ಷಿಸುತ್ತಿದ್ದಾಗ ಹೊನ್ನಾವರ ತರ್ಫನಿಂದ ಬಂದಂತಹ ಒಂದು ಟ್ರ್ಯಾಕ್ಸ್ ಜೀಪ್ ಸಂಖ್ಯೆ: ಕೆಎ-30/ಎಂ-1145 ನೇಯದು ತಮ್ಮ ಜೀಪನ್ನು ಕಂಡು ಶಿರಾಲಿಯ ಎನ್.ಎಚ್-17 ರಸ್ತೆಯ ಪಕ್ಕದ ಬಾಬು ಗಣಪಾ ಶಿರೂರ ಇವರ ಟಾಯರ್ ಟ್ಯೂಬ್ ಪಂಚರ್ ತೆಗೆಯುವ ಅಂಗಡಿಯ ಮುಂದೆ ನಿಲ್ಲಿಸಿ ಅದರಲ್ಲಿದ್ದ ಜನರು ಓಡಲಾರಂಭಿಸಿದಾಗ ಸಂಶಯ ಬಂದು, ಅವರನ್ನು ಬೆನ್ನಟ್ಟಿದಾಗ, ಓಡಿ ಹೋದವರ ಪೈಕಿ ಇಬ್ಬರನ್ನು ಹಿಡಿಯಲಾಗಿ ಉಳಿದವರು ಓಡಿ ಹೋದಾಗ, ಆಗ ದಿನಾಂಕ: 23.12.2001 ರ ರಾತ್ರಿ ಸಮಯ 1.00 ಗಂಟೆಯಾಗಿತ್ತೆಂದೂ, ಆಪಾದಿತರು ಬಿಟ್ಟು ಹೋದ ಜೀಪನ್ನು ಪಂಚರ ಸಮಕ್ಷಮ ತಪಾಸಣೆ ಮಾಡಿದಾಗ ಅದರಲ್ಲಿ 7 ಟ್ಯೂಬ್‌ಗಳಿದ್ದು ಪ್ರತಿಯೊಂದರಲ್ಲೂ ತಲಾ 30 ಲೀಟರ್ ಆಗುವಷ್ಟು ಬೆಲ್ಲದ ಭಟ್ಟಿ ಸಾರಾಯಿ ಮತ್ತು ಒಂದು ಪ್ಲಾಸ್ಟಿಕ್ ಕ್ಯಾನಿನಲ್ಲಿ 20 ಲೀಟರ್ ಆಗುವಷ್ಟು ಕಳ್ಳಭಟ್ಟಿ ಸಾರಾಯಿ ಇತ್ತೆಂದೂ, ಇವುಗಳನ್ನು ರಹದಾರಿ ಪತ್ರ ಹೊಂದದೇ ಸಾಗಿಸಿದ್ದು ಕಂಡುಬಂದಿದ್ದರಿಂದ ಸದರಿ ಮದ್ಯಸಾರದ ಸ್ವತ್ತುಗಳು ಹಾಗೂ ವಾಹನವನ್ನು ಜಪ್ತು ಮಾಡಿ ಮುಂದಿನ ಕ್ರಮದ ಕುರಿತು ಭಟ್ಕಳ ಗ್ರಾಮೀಣ ಪೊಲೀಸ್ ಠಾಣೆಗೆ ಫಿರ್ಯಾದ ನೀಡಿದ ಪ್ರಕಾರ ಭಟ್ಕಳ ಗ್ರಾಮೀಣಾ ಪೊಲೀಸ್ ಠಾಣೆಯ ಪ್ರ.ಮಾ. ವರದಿ ಸಂಖ್ಯೆ: 130/2001, ದಿ: 23.12.2001 ರಂತೆ ಪ್ರಕರಣವನ್ನು ದಾಖಲಿಸಿದ್ದು, ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 34ರ ಪ್ರಕಾರ ಶಿಕ್ಷಾರ್ಹವಾಗಿರುವುದಾಗಿ ತಿಳಿಸಿ, ಜಪ್ತಾದ ಮುದ್ದೆಮಾಲನ್ನು (ಮಾದರಿ ಸೀಸೆಗಳನ್ನು ಹೊರತುಪಡಿಸಿ) ಹಾಗೂ ಗುನ್ಹೆಗೆ ಸಂಬಂಧಿಸಿದ ದಾಖಲಾತಿಗಳನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 ಎ(2) ರನ್ವಯ ಜಪ್ತಿಯಾದ ಸ್ವತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಕ್ಕಾಗಿ ವಿನಂತಿಸಿರುತ್ತಾರೆ.

3. ದಿನಾಂಕ: 8.1.2002 ರಂದು ಶ್ರೀ ವಿ.ಎಸ್. ಭಾಗ್ವತ, ವಕೀಲರು ಕಾರವಾರ ರವರು ಅರ್ಜಿಯನ್ನು ಸಲ್ಲಿಸುತ್ತಾ, ಜಪ್ತಿಯಾದ ವಾಹನದ ಝೆರಾಕ್ಸ್ ನಕಲನ್ನು ಲಗತ್ತಿಸಿ ಈ ವಾಹನವು ನಜೀರ ಶೇಖ್ ತಂದೆ ಮೊಹಿದ್ದೀನ ಶೇಖ್, ವಾಸ: ಆಜಾದನಗರ ಹೊನ್ನಾವರ ಇವರ ಮಾಲೀಕತ್ವದಾಗಿದ್ದು, ಈ ಪ್ರಕರಣದಲ್ಲಿ ಹೊರಿಸಲಾದ ಆರೋಪಗಳು ಸುಳ್ಳೆಂದು ತಿಳಿಸುತ್ತಾ ವಾಹನವನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ವಿನಂತಿಸಿರುತ್ತಾರೆ. ಆನಂತರ ಪ್ರಾಧಿಕಾರದ ಆದೇಶ ದಿನಾಂಕ: 25.1.2002 ರಂತೆ ಅರ್ಜಿದಾರರ ಮನವಿಯನ್ನು ತಿರಸ್ಕರಿಸಿ ಆದೇಶಿಸಿದ ವಿರುದ್ಧ ಮೇಲ್ಮನವಿ ಸಲ್ಲಿಸಿದ ಪ್ರಕಾರ ಮಾನ್ಯ ಸೆಶನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 10/2002 ದಿನಾಂಕ: 13.2.2002 ರಂತೆ ಸದ್ರಿ ವಾಹನಕ್ಕೆ ಸಮನಾದ ಬೆಲೆಯ ಬ್ಯಾಂಕ್ ಗ್ಯಾರಂಟಿಯನ್ನು ಪಡೆದು ಬಿಡುಗಡೆ

ಮಾಡಲು ಆದೇಶಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನಿಗದಿಪಡಿಸಿದ ಬೆಲೆಯ ಬ್ಯಾಂಕ್ ಗ್ಯಾರಂಟಿಯನ್ನು ಸಲ್ಲಿಸಲು ಅರ್ಜಿದಾರರಿಗೆ ಹಿಂಬರಹ ನೀಡಲಾಗಿ ಅವರು ಸಲ್ಲಿಸದಿದ್ದುದರಿಂದ ವಾಹನದ ಮಧ್ಯಂತರ ಬಿಡುಗಡೆ ಆಗಿರುವುದಿಲ್ಲ.

4. ಈ ಪ್ರಕರಣದಲ್ಲಿ ಜಪ್ತಿಯಾದಂತಹ ಸ್ವತ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕಾಗಿ ಕ.ಅ. ಕಾಯಿದೆ 1965ರ ಕಲಂ 43ಬಿ (1)-ಎ ಪ್ರಕಾರ ಆರೋಪಿಗಳಿಗೆ ಕಾರಣ ಕೇಳಿ ನೋಟೀಸನ್ನು ಜಾರಿ ಮಾಡಲು ತನಿಖಾಧಿಕಾರಿಗಳ ಮೂಲಕ ಕಳುಹಿಸಲಾಗಿ ಅದನ್ನು ಅವರು ಎಲ್ಲರಿಗೂ ಜಾರಿ ಮಾಡಿ ಈ ಪ್ರಾಧಿಕಾರಕ್ಕೆ ಮರಳಿಸಿರುತ್ತಾರೆ. ದಿನಾಂಕ: 8.2.2002 ರಂದು ಈ ಪ್ರಕರಣದ ಆರೋಪಿ ನಂ. 2 ಹಾಗೂ ಅರ್ಜಿದಾರರಾದಂತಹ ನಜೀರ ಶೇಖ್ ಇವರು ಕಾರಣ ಕೇಳಿ ನೋಟೀಸಿಗೆ ತನ್ನ ಸಮಜಾಯಿಸಿಯನ್ನು ಸಲ್ಲಿಸುತ್ತಾ, ತನ್ನ ಮಾಲೀಕತ್ವದ ಟ್ರ್ಯಾಕ್ಸ್ ನಂ. ಕೆಎ-30/ಎಂ-1145 ನೇದನ್ನು ದಿನಾಂಕ: 22.12.2001 ರಂದು ಭಟ್ಕಳ ಗ್ರಾಮೀಣ ಪಿ.ಎಸ್.ಐ. ರವರು ನಿಲ್ಲಿಸಿದರೆಂದು ಹೇಳುವುದು ಸುಳ್ಳೆಂದು ತಿಳಿಸಿರುತ್ತಾರೆ. ಉಳಿದ ಆರೋಪಿಗಳ್ಯಾರು ತಮ್ಮ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ.

5. ಅಬಕಾರಿ ಉಪ ನಿರೀಕ್ಷಕರು, ಉಪ ವಲಯ ಭಟ್ಕಳ ಇವರು ಈ ಪ್ರಕರಣದಲ್ಲಿ ಜಪ್ತಿಯಾದಂತಹ ಸ್ವತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವಿನಂತಿಸುತ್ತಾ, ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ಬಗೆಗಿನ ರಾಸಾಯನಿಕ ವಿಶ್ಲೇಷಣಾ ವರದಿಯ ಪ್ರತಿಯನ್ನು ಸಲ್ಲಿಸಿರುತ್ತಾರೆ. ಅದರಂತೆ ಮಾದರಿ ಸೀಸೆಗಳಲ್ಲಿ ಮದ್ಯಸಾರ ಇದೆಯೆಂದು ಮತ್ತು ಅದರಲ್ಲಿನ ತೀಕ್ಷ್ಣತೆಯು ಶೇ. 38.53 ವಿ.ವಿ. ರಷ್ಟು ಇರುವುದಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ.

6. ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ ವಾಹನದ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಬಿ(1)-ಸಿ ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಯ ಪ್ರತಿಗಳನ್ನು ಸಿ.ಆರ್.ಪಿ.ಸಿ. ಕಲಂ 207 ರಂತೆ ಅರ್ಜಿದಾರರಿಗೆ ನೀಡಲಾಯಿತು. ನಂತರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 34 ರಂತೆ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ ಅರ್ಜಿದಾರರು ತನ್ನ ಮೇಲೆ ಹೊರಿಸಿದ ಆರೋಪಗಳನ್ನು ಅಲ್ಲಗಳೆದಾಗ ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿಡಬ್ಲ್ಯೂ-1 ರಿಂದ 4 ರವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ ನಿಶಾನೆ ಪಿ-1 ರಿಂದ ಪಿ-4 ರವರೆಗೆ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ. ಈ ಪ್ರಕರಣದ ಪಂಚ ಸಾಕ್ಷಿದಾರರಿಬ್ಬರೂ ಪಿಡಬ್ಲ್ಯೂ-1 ಮತ್ತು ಪಿಡಬ್ಲ್ಯೂ-2 ರಂತೆ ಪ್ರತಿಕೂಲ ಸಾಕ್ಷಿಯನ್ನು ನುಡಿದಿರುತ್ತಾರೆ.

7. ಆದಾಗ್ಯೂ ಎದುರುದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡು ಬಂದಿದ್ದರಿಂದ ದಂಡ ಪ್ರಕ್ರಿಯೆ ಸಂಹಿತೆ ಕಲಂ 313 ರಡಿಯಲ್ಲಿ ಅರ್ಜಿದಾರರ ಪರ ಹೇಳಿಕೆಯನ್ನು ಡಿ.ಡಬ್ಲ್ಯೂ-1 ರಂತೆ ಪಡೆದುಕೊಳ್ಳಲಾಯಿತು. ಹಾಗೂ ನಿಶಾನೆ-ಪಿ ಗೆ ನೇದನ್ನು ಗುರ್ತಿಸಿಕೊಳ್ಳಲಾಯಿತು.

8. ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು ಕಾರವಾರ ರವರು ಹಾಗೂ ಅರ್ಜಿದಾರರ ಪರವಾಗಿ ಶ್ರೀ ವಿ.ಎಸ್. ಭಾಗ್ವತ, ವಕೀಲರು ಕಾರವಾರ ರವರು ಮಂಡಿಸಿದ ವಾದ ವಿವಾದಗಳನ್ನು ಆಲಿಸಲಾಯಿತು. ಕಡತದಲ್ಲಿ ಲಭ್ಯವಿರುವ ದಾಖಲೆಗಳನ್ನು ಅವಲೋಕಿಸಲಾಯಿತು. ಉಭಯತರ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡು ಬರುತ್ತದೆ.

9. 1. ದಿನಾಂಕ: 22.12.2001 ರಂದು ರಾತ್ರಿ 22.35 ಗಂಟೆಯ ಸಮಯಕ್ಕೆ ಆರೋಪಿ ನಂ. 1 ರಿಂದ 5ನೇ ಯವರು ಟೆಂಪೊ ಟ್ರ್ಯಾಕ್ಸ್ ಜೀಪ್ ಸಂಖ್ಯೆ: ಕೆಎ-30/ಎಂ-1145 ರಲ್ಲಿ ಶಿರಾಲಿ ತರ್ಫಿನ ಎನ್.ಎಚ್. 17 ರಸ್ತೆಯ ಪಕ್ಕದಲ್ಲಿ ಯಾವುದೇ ರೀತಿಯ ಪಾಸ್ ಅಥವಾ ಪರ್ಮಿಟ್ ಇಲ್ಲದೇ ಬೆಲ್ಲದ ಕಳ್ಳಭಟ್ಟಿ ಸಾರಾಯಿಯನ್ನು ಏಳು ಟಾಯರ್ ಟ್ಯೂಬುಗಳಲ್ಲಿ ಮತ್ತು ಒಂದು ಕ್ಯಾನಿನಲ್ಲಿ ಸಾಗಿಸುತ್ತಿದ್ದರೇ?

2. ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಈ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ?

3. ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ?

ಅಂಶ 1 : ಸಕಾರಾತ್ಮಕವಾಗಿ

ಅಂಶ 2 : ನಕಾರಾತ್ಮಕವಾಗಿ

ಅಂಶ 3 : ಸಕಾರಾತ್ಮಕವಾಗಿ

## ಕಾರಣಗಳು

10. ಒಂದನೆಯ ವಿವಾದಾಂಶವನ್ನು ರುಜುವಾತುಪಡಿಸಲು ಅಭಿಯೋಜಕರ ಪರ ಸಾಕ್ಷಿದಾರರಾದ ಈ ಪ್ರಕರಣದ ಪಂಚಸಾಕ್ಷಿ ನಂ. 2ನೇ ಯವರಾದ ಮಂಜುನಾಥ ವೀರಭದ್ರ ನಾಯ್ಕ ಇವರು ಈ ಪ್ರಾಧಿಕಾರದಲ್ಲಿ ದಿನಾಂಕ: 20.11.2002 ರಂದು ಹಾಜರಾಗಿ ಪ್ರತಿಕೂಲ ಸಾಕ್ಷಿ ನುಡಿದು ನಂತರ ಪಾಟೀಸವಾಲಿನಲ್ಲಿ ತಾನು ಅರ್ಜಿದಾರರಿಗೆ ಸಹಾಯವಾಗಲೆಂದು ಸುಳ್ಳು ಸಾಕ್ಷಿ ನುಡಿಯುತ್ತಿದ್ದೇನೆನ್ನುವುದು ಸುಳ್ಳೆಂದು ನುಡಿದಿರುತ್ತಾರೆ. ಆದರೆ ಇದನ್ನು ನಂಬಲು ಬರುವುದಿಲ್ಲ.

11. ಅದೇ ರೀತಿಯಾಗಿ ಈ ಪ್ರಕರಣದ ಪಂಚಸಾಕ್ಷಿ ನಂಬರ್ ಒಂದನೆಯವರಾದ ಮಂಜುನಾಥ ಲಕ್ಷ್ಮಣ ನಾಯ್ಕ ಇವರು ಸಹ ಪ್ರಾಧಿಕಾರದಲ್ಲಿ ದಿನಾಂಕ: 20.11.2002 ರಂದು ಹಾಜರಾಗಿ ಮುಖ್ಯ ವಿಚಾರಣೆಯಲ್ಲಿ ಸಾಕ್ಷಿ ನುಡಿಯುತ್ತ ಪ್ರತಿಕೂಲ ಸಾಕ್ಷಿಯನ್ನು ನುಡಿದಿರುತ್ತಾರೆ. ನಂತರ ಪಾಟೀ ಸವಾಲಿನಲ್ಲಿ ಪಂಚನಾಮೆಗೆ ತಿಳಿದು ಸಹಿ ಮಾಡಿದ್ದೇನೆನ್ನುವುದು ಸುಳ್ಳೆಂದು ಮತ್ತು ಅರ್ಜಿದಾರರಿಗೆ

ಸಹಾಯವಾಗಲೆಂದು ಸುಳ್ಳು ಸಾಕ್ಷಿ ನುಡಿಯುತ್ತಿದ್ದೇನೆನ್ನುವುದು ಸರಿಯಲ್ಲವೆಂದು ಹೇಳಿರುತ್ತಾರೆ. ಆದರೆ ಇದನ್ನು ನಂಬಲು ಬಲವಾದ ಕಾರಣಗಳಿರುವುದಿಲ್ಲ.

12. ಈ ಪ್ರಕರಣದ ಪಿರ್ಯಾದುದಾರರು ಹಾಗೂ ಅಭಿಯೋಜಕರ ಪರ ಮುಖ್ಯ ಸಾಕ್ಷಿದಾರರಾದ ಜಿ.ಎಫ್. ನಾಯ್ಕ, ಪಿ.ಎಸ್.ಐ. ಇವರು ದಿನಾಂಕ: 26.2.2003 ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿಡಬ್ಲ್ಯೂ-3 ರಂತೆ ಮಾನ್ಯ ಎಡಿಪಿ ಯವರ ಮುಖ್ಯ ವಿಚಾರಣೆಗೆ ಉತ್ತರಿಸುತ್ತ ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿನಲ್ಲಿ ಸ್ಟೇಷನ್ ಡೈರಿಯ ಪ್ರತಿಯನ್ನು ನಾನು ಪ್ರಾಧಿಕಾರದ ಮುಂದೆ ಹಾಜರುಪಡಿಸಿರುವುದಿಲ್ಲವಾಗಿ ಹಾಗೂ ಮ್ಯಾಜಿಸ್ಟ್ರೇಟ್ ಕಡೆಯಿಂದ ವಾಹನ ಸರ್ಚ್ ಮಾಡುವ ಬಗ್ಗೆ ವಾರಂಟ್ ಪಡೆದುಕೊಳ್ಳಲಿಲ್ಲವೆಂದೂ ಭಟ್ಕಳದಿಂದಲೇ ಪಂಚರನ್ನು ತಮ್ಮ ಜೀಪಿನಲ್ಲಿ ಕರೆದುಕೊಂಡು ಹೋಗಿದ್ದೇವೆಂದೂ, ಅವರು ಅಬಕಾರಿ ಗುತ್ತಿಗೆದಾರರಲ್ಲಿ ಕೆಲಸಕ್ಕಿರುವ ಜನರೆನ್ನುವುದು ತನಗೆ ಗೊತ್ತಿಲ್ಲವೆಂದೂ, ಶಿರಾಲಿಯ ಹತ್ತಿರದ ರಾಷ್ಟ್ರೀಯ ಹೆದ್ದಾರಿಯ ಮೇಲೆ ರಾತ್ರಿ ವೇಳೆಗೆ ಸಾಕಷ್ಟು ವಾಹನಗಳ ಸಂಚಾರ ಇರುತ್ತದೆ ಎನ್ನುವುದು ಸರಿಯೆಂದೂ, ಪ್ರಾಧಿಕಾರದ ಮುಂದೆ ಹಾಜರಿರುವ ಅರ್ಜಿದಾರನು ವಾಹನದ ಮಾಲೀಕನಾಗಿದ್ದರಿಂದ ಆತನ ಮೇಲೆ ಪ್ರ.ಮಾ. ವರದಿಯಲ್ಲಿ ಸುಳ್ಳು ಹೆಸರು ದಾಖಲು ಮಾಡಿದ್ದೇವೆನ್ನುವುದು ಸರಿಯಲ್ಲವೆಂದೂ ಶಿರಾಲಿಯಲ್ಲಿ ಹಾಳಾಗಿ ನಿಂತಂತಹ ವಾಹನವನ್ನು ತಮ್ಮ ಜೀಪಿಗೆ ಕಟ್ಟಿ ಅದನ್ನು ಠಾಣೆಗೆ ಒಯ್ದೆವು ಎನ್ನುವುದು ಸರಿಯಲ್ಲವೆಂದು ನುಡಿದಿರುತ್ತಾರೆ.

**ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-**

13. ಸ್ಟೇಷನ್ ಡೈರಿಯನ್ನು ತರಿಸಲು ಎದುರುದಾರರ ಪಕ್ಷದವರು ಕೇಳಿಕೊಂಡಲ್ಲಿ ಅದನ್ನು ಫಿರ್ಯಾದುದಾರರಿಂದ ತರಿಸಬಹುದಾಗಿತ್ತೇ ಹೊರತೂ ಸಾಕ್ಷಿ ನುಡಿಯಲು ಬಂದಾಗ ಸ್ಟೇಷನ್ ಡೈರಿಯ ಪ್ರತಿಯನ್ನು ಪ್ರಾಧಿಕಾರದ ಮುಂದೆ ಹಾಜರುಪಡಿಸಿಲ್ಲವೆಂದು ಕೇಳುವುದು ಸಮಂಜಸವೆಂದು ಕಂಡುಬರುವುದಿಲ್ಲ. ಕ.ಅ. ಕಾಯ್ದೆ 1965ರ ಕಲಂ 52ರ ಪ್ರಕಾರ ಇರುವ ಅಧಿಕಾರವನ್ನು ಬಳಸಿ, ಆರೋಪಿಯು ತಪ್ಪಿಸಿಕೊಳ್ಳುವ ಸಂದರ್ಭ ಇದ್ದಲ್ಲಿ ಮತ್ತು ಮುದ್ದೆಮಾಲುಗಳನ್ನು ಬೇರೆಡೆಗೆ ಸಾಗಿಸಬಹುದೆಂಬ ಅನುಮಾನವಿದ್ದಾಗ ಘನ ನ್ಯಾಯಾಲಯದಿಂದ ಸರ್ಚ್ ವಾರಂಟನ್ನು ಪಡೆಯಲು ಸಾಧ್ಯವಾಗದಿದ್ದ ಸಂದರ್ಭದಲ್ಲಿ ಜಪ್ತು ಮತ್ತು ದಸ್ತಗಿರಿಯ ಕ್ರಮವನ್ನು ಜರುಗಿಸಲು ಅನ್ವೇಷಣಾಧಿಕಾರಿಗೆ ಅಧಿಕಾರವಿರುತ್ತದೆ. ಯಾವ ಸ್ಥಳದಲ್ಲಿ ವಾಹನ ಸಿಗಬಹುದೆಂಬ ಖಾತ್ರಿಯು ಇರದಿದ್ದುದರಿಂದ ಪಂಚರನ್ನು ಮೊದಲೇ ಕರೆದುಕೊಂಡು ಹೋಗಿರುವುದು ಸಮರ್ಪಕವಾಗಿದೆ. ಸದ್ರಿ ಸಾಕ್ಷಿಗಳು ಸಾರಾಯಿ ಗುತ್ತಿಗೆದಾರರಲ್ಲಿ ಕೆಲಸಕ್ಕಿರುವ ಜನರೆನ್ನುವ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ಎದುರುದಾರರ ಪಕ್ಷದವರು ಹಾಜರುಪಡಿಸಿಲ್ಲ. ಒಂದು ವೇಳೆ ಇವರು ಸಾರಾಯಿ ಗುತ್ತಿಗೆದಾರರ ಜನರೇ ಆಗಿದ್ದಲ್ಲಿ ಇವರಿಗೂ ಮತ್ತು ಆರೋಪಿಗಳಿಗೂ ಇರುವ ದ್ವೇಷ ಅಥವಾ ವೈಷಮ್ಯವೇನೆನ್ನುವುದರ ಬಗ್ಗೆ ವಿವರಿಸಿಲ್ಲ. ವಾಹನ ಜಪ್ತು ಮಾಡಿದ ಸಮಯದಲ್ಲಿ ಅರ್ಜಿದಾರರೂ ಸಹ ದಸ್ತಗಿರಿಗೆ ಸಿಕ್ಕ ಎರಡನೆಯ ಆರೋಪಿಯಾಗಿದ್ದು ಇವರನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿದ ಹಾಗೂ ನಂತರ ಜಾಮೀನಿನ ಮೇಲೆ ಬಿಟ್ಟ ದಾಖಲೆಗಳಿರುವಾಗ ಸುಳ್ಳು ಹೆಸರನ್ನು ಪ್ರ.ಮಾ. ವರದಿಯ ಮೇಲೆ ನಮೂದಿಸುವ ಪ್ರಮೇಯವೇ ಇರುವುದಿಲ್ಲ.

14. ಈ ಪ್ರಕರಣದಲ್ಲಿ ಫಿರ್ಯಾದುದಾರರ ಸಿಬ್ಬಂದಿಯಾದ ಘಟನೆಯ ದಿನದಂದು ಹಾಜರಿದ್ದಂತಹ ಅನಿಲ್ ರಾಮಚಂದ್ರ ನಾಯ್ಕ, ಪಿ.ಸಿ-459 ಇವರು ಪಿಡಬ್ಲ್ಯೂ-4 ರಂತೆ ತನ್ನ ಸಾಕ್ಷಿಯನ್ನು ನುಡಿಯುತ್ತಾ ಮಾನ್ಯ ಎಡಿಪಿಯವರ ಮುಖ್ಯ ವಿಚಾರಣೆಯಲ್ಲಿ ಪಂಚನಾಮೆಯಂತೆ ಸರಿಯಾದ ಸಾಕ್ಷಿಯನ್ನು ನುಡಿದಿರುತ್ತಾರೆ. ನಂತರ ಎದುರುದಾರರ ಪಕ್ಷದವರ ವಕೀಲರ ಪಾಟೀಸವಾಲಿನಲ್ಲಿ ಸದ್ರಿ ಸಾಕ್ಷಿಯ ಬಾಯಿಂದ ವಾಹನವನ್ನು ಫಿರ್ಯಾಧಿ ಕಡೆಯವರ ಜೀಪಿಗೆ ಕಟ್ಟಿಕೊಂಡು ಠಾಣೆಗೆ ಒಯ್ಯಲಾಯಿತೆಂಬ ಬಗ್ಗೆ ನುಡಿಸಲು ಪ್ರಯತ್ನಿಸಲಾಗಿದೆಯೇ ಹೊರತು ಇನ್ನುಳಿದಂತೆ ಎದುರುದಾರರ ಪಕ್ಷದವರಿಗೆ ಸಹಾಯಕವಾಗುವಂತಹ ಯಾವುದೇ ಪ್ರಶ್ನೆಯನ್ನು ಕೇಳಿರುವುದು ಕಂಡು ಬರುವುದಿಲ್ಲ. ಅಲ್ಲದೇ ಮಾನ್ಯ ಜೆ.ಎಂ.ಎಫ್.ಸಿ. ಭಟ್ಕಳ ದಿಂದ ಪ್ರಕರಣದ ಆರೋಪಿಗಳು ಬಿಡುಗಡೆಯಾಗಿರುವ ಬಗ್ಗೆ ಸಾಬೀತುಪಡಿಸುತ್ತಾ ಈ ಬಗ್ಗೆ ತೀರ್ಪಿನ ನಕಲನ್ನು ಸಹ ಹಾಜರುಪಡಿಸಲಾಗಿದೆ. ಆದರೆ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43-ಎ(2) ರಲ್ಲಿ on production of the seized property under Sub-Section (1) the Authorised Officer, if satisfied that an offence under this act has been committed may whether or not a prosecution is instituted for the Commission of such offence order confiscation of such property ಎಂದಿರುವುದರಿಂದ ಕ್ರಿಮಿನಲ್ ನಡಾವಳಿಯೇ ಬೇರೆ ಮತ್ತು ಮುಟ್ಟುಗೋಲು ನಡಾವಳಿಯೇ ಬೇರೆಯಾಗಿರುವುದರಿಂದ ಕ್ರಿಮಿನಲ್ ಪ್ರಕರಣದಲ್ಲಿನ ತೀರ್ಪನ್ನು ಮುಟ್ಟುಗೋಲು ನಡಾವಳಿಯಲ್ಲಿ ಪರಿಗಣಿಸಲು ಬರಲಾರದಾಗಿ ನನ್ನ ಅಭಿಪ್ರಾಯವಾಗಿದೆ. ಅಲ್ಲದೇ ಜಪ್ತಿಯಾದಂತಹ ಕಳ್ಳಭಟ್ಟಿ ಸಾರಾಯಿಯನ್ನು ಪ್ರಾಧಿಕಾರದ ಮುಂದೆ ಹಾಜರುಪಡಿಸಿ, ತಾಬಾದಲ್ಲಿ ಇಟ್ಟುಕೊಳ್ಳಲು ಪಿರ್ಯಾದಿಯು ಅನುಮತಿ ಪಡೆದಿರುವುದರಿಂದ ಇದನ್ನು ಆರೋಪಿಗಳಿಂದ ಜಪ್ತಿ ಮಾಡಿಲ್ಲವೆಂದು ಹೇಳಲು ಬರುವುದಿಲ್ಲ.

15. ಈ ಎಲ್ಲಾ ಕಾರಣಗಳಿಂದಾಗಿ ಈ ಪ್ರಕರಣದಲ್ಲಿ ಜಪ್ತಿಯಾಗಿರುವ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿಯನ್ನು ಸಾಗಿಸಿರುವುದನ್ನು ಅಭಿಯೋಜನೆ ಪಕ್ಷದವರು ಪ್ರಬಲವಾಗಿ ಸಮರ್ಥಿಸಿರುವುದು ಮತ್ತು ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ನಿಸ್ಸಂಶಯವಾಗಿ ರುಜುವಾತುಪಡಿಸಿರುವುದು ಕಂಡುಬಂದಿರುವುದರಿಂದ ಒಂದನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸಲಾಗಿದೆ.

16. ಅರ್ಜಿದಾರರಾದಂತಹ ನಜೀರ ಮೋಹಿದ್ದೀನ ಶೇಖ್ ಇವರು ದಿನಾಂಕ: 28.1.2004 ರಂದು ಪ್ರಾಧಿಕಾರದಲ್ಲಿ ಹಾಜರಾಗಿ ತನ್ನ ಪರ ವಕೀಲರು ಮುಖ್ಯ ವಿಚಾರಣೆಯಲ್ಲಿ ತನ್ನ ಸಾಕ್ಷ್ಯವನ್ನು ನುಡಿಯುತ್ತ, ತಾನು ಬಟ್ಟೆ ಮತ್ತು ಕಿರಾಣಿ ವ್ಯಾಪಾರ ಮಾಡುವುದರ ಸಲುವಾಗಿ ವಾಹನವನ್ನು ಇಟ್ಟುಕೊಂಡಿದ್ದೇನೆಂದೂ ಹೊನ್ನಾವರ ಅರ್ಬನ್ ಬ್ಯಾಂಕಿನಲ್ಲಿ ಒಂದು ಲಕ್ಷ ರೂ.ಗಳ ಸಾಲವನ್ನು ಪಡೆದಿರುತ್ತೇನೆಂದೂ ದಿ: 22.12.2001 ರಂದು ಈ ವಾಹನವನ್ನು ಸಂಜೆ 6.00 ಗಂಟೆಗೆ ಹೊನ್ನಾವರದಿಂದ ಭಟ್ಕಳದ ಕಡೆಗೆ ಚಲಾಯಿಸಿಕೊಂಡು ಹೋಗುತ್ತಿದ್ದೇನೆಂದೂ ಶಿರಾಲಿಯ ಹತ್ತಿರ ತನ್ನ ಗಾಡಿಯ ಗೇರ್ ಬಾಕ್ಸ್ ಹಾಳಾಗಿ ನಿಲ್ಲಿಸಿದ್ದೇನೆಂದೂ ಮತ್ತು ಹೊನ್ನಾವರಕ್ಕೆ ಮೆಕಾನಿಕ್

ಇಬ್ರಾಹಿಂನನ್ನು ಕರೆಯಲು ಹೋಗಿದ್ದೇನೆಂದೂ ಆ ದಿನ ಆತನು ಸಿಗಲಿಲ್ಲವೆಂದೂ ಮಾರನೆಯ ದಿನ ಬೆಳಿಗ್ಗೆ ಆತನಿಗೆ ಕರೆದುಕೊಂಡು ಶಿರಾಲಿಗೆ ಬಂದೆನೆಂದೂ ಆ ಸಮಯದಲ್ಲಿ ಅಲ್ಲಿ ತನ್ನ ವಾಹನ ಇರಲಿಲ್ಲವೆಂದೂ ಆಸುಪಾಸಿನ ಜನರಲ್ಲಿ ಚೌಕಾಶಿ ಮಾಡಿದಾಗ ಪೊಲೀಸರು ಭಟ್ಕಳಕ್ಕೆ ತೆಗೆದುಕೊಂಡು ಹೋಗಿದ್ದು ತಿಳಿದುಬಂತೆಂದೂ, ನಂತರ ತಾನು ಭಟ್ಕಳ ಠಾಣೆಗೆ ಹೋದಾಗ ಅಲ್ಲಿ ತನ್ನನ್ನು ದಸ್ತಗಿರಿ ಮಾಡಿದರೆಂದೂ ನುಡಿದಿರುತ್ತಾರೆ.

**ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-**

ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದ ಮಾಲೀಕರೇ ಆರೋಪಿಯು ಆಗಿದ್ದು ಇವರು ಬಟ್ಟೆ ಮತ್ತು ಕಿರಾಣಿ ವ್ಯಾಪಾರವನ್ನು ಈ ವಾಹನದ ಮೇಲೆ ಮಾಡುವ ಬಗ್ಗೆ ಯಾವುದೇ ದಾಖಲೆಯನ್ನು ಹಾಜರುಪಡಿಸಿಲ್ಲ. ಹೊನ್ನಾವರದಿಂದ ಭಟ್ಕಳಕ್ಕೆ ಘಟನೆ ಸಂಭವಿಸಿದ ದಿನದಂದು ಅರ್ಜಿದಾರರು ವಾಹನವನ್ನು ತಾನೇ ಚಲಾಯಿಸಿಕೊಂಡು ಹೋಗುತ್ತಿದ್ದೆನ್ನುವ ಬಗ್ಗೆ ಒಪ್ಪಿಕೊಂಡಿದ್ದು ಯಾವ ಉದ್ದೇಶಕ್ಕಾಗಿ ಹೋಗುತ್ತಿದ್ದನೆನ್ನುವ ಬಗ್ಗೆಯಾಗಲೀ ಅಥವಾ ಯಾವ ರೀತಿಯ ಸರಕನ್ನು ಅಥವಾ ಪ್ರಯಾಣಿಕರನ್ನು ಹೇರಿಕೊಂಡು ವಾಹನವನ್ನು ಚಲಾಯಿಸುತ್ತಿದ್ದೆ ಎನ್ನುವ ಬಗ್ಗೆಯಾಗಲೀ ತಿಳಿಸಿಲ್ಲ. ಲಕ್ಷಗಟ್ಟಲೆ ಬೆಲೆಬಾಳುವ ವಾಹನವನ್ನು ಘಟನೆ ಸಂಭವಿಸಿದ ದಿನ ರಾತ್ರಿಯಿಡೀ ಯಾವುದೇ ರೀತಿಯ ಸುರಕ್ಷತೆ ಇಲ್ಲದೇ ಮತ್ತು ಕಾವಲಿಲ್ಲದೇ ವಾಹನವನ್ನು ಏಕೆ ಬಿಟ್ಟು ತಾನು ಭಟ್ಕಳದಲ್ಲಿ ಉಳಿದುಕೊಂಡರು ಎನ್ನುವ ಬಗ್ಗೆ ವಿವರಿಸಿಲ್ಲ. ಆದುದರಿಂದ ಈ ಪ್ರಕರಣದಲ್ಲಿ ಜಪ್ತಿಯಾದಂತಹ ವಾಹನದಲ್ಲಿ ಅದರ ಮಾಲೀಕ ಮತ್ತು ಚಾಲಕನ ಸಮ್ಮತಿಯಿಂದಲೇ ಮತ್ತು ಆತನು ಶಾಮೀಲಾಗಿಯೇ ಹಾಗೂ ಅವನಿಗೆ ಅರಿವಿದ್ದುಕೊಂಡೇ ಕಳ್ಳಭಟ್ಟಿ ಸಾರಾಯಿಯನ್ನು ಸಾಗಿಸಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಆದುದರಿಂದ ಎರಡನೆಯ ವಿವಾದಾಂಶವನ್ನು ನಕಾರಾತ್ಮಕವಾಗಿ ಉತ್ತರಿಸಲಾಗಿದೆ.

17. **ಮೂರನೆಯ ವಿವಾದಾಂಶ:-** ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಈ ಪ್ರಕರಣದಲ್ಲಿ ಜಪ್ತಿ ಮಾಡಲ್ಪಟ್ಟ ವಾಹನದಲ್ಲಿ ಕಳ್ಳಭಟ್ಟಿ ಸಾರಾಯಿಯನ್ನು ಸಾಗಿಸಿರುವುದು ಸಾಬೀತಾಗಿರುವುದರಿಂದ ಹಾಗೂ ಮಾನ್ಯ ಸೆಶನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 78/2000 ದಿನಾಂಕ: 7.11.2003 ರಲ್ಲಿ ಈ ಪ್ರಾಧಿಕಾರದ ಆದೇಶವನ್ನು ಎತ್ತಿ ಹಿಡಿದಿರುವುದರಿಂದ, ಸದ್ರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಗಿನಂತೆ,

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಪ್ರಕಾರ ಅನುಸರಿಸಬೇಕಾದಂತಹ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43 ಎ(1) ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಭಟ್ಕಳ ಗ್ರಾಮೀಣ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ: 130/2001, ದಿನಾಂಕ: 23.12.2001 ರಲ್ಲಿ ಜಪ್ತಿಯಾದಂತಹ ಟ್ರ್ಯಾಕ್ಸ್ ಜೀಪ್ ಸಂ. ಕೆಎ-30/ಎಂ-1145 ನೇದನ್ನು ಹಾಗೂ ಪ್ರತಿಯೊಂದರಲ್ಲಿ ತಲಾ 30 ಲೀಟರ್ ನಂತೆ ಕಳ್ಳಭಟ್ಟಿ ಸಾರಾಯಿ ಇರುವ ಏಳು ಟ್ಯೂಬುಗಳು ಹಾಗೂ 20 ಲೀ. ನ ಒಂದು ಪ್ಲಾಸ್ಟಿಕ್ ಕ್ಯಾನಿನಲ್ಲಿ ಇರುವ ಕಳ್ಳಭಟ್ಟಿ ಸಾರಾಯಿಯನ್ನು ಕಲಂ 43-ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಮುಟ್ಟುಗೋಲು ಹಾಕಿಕೊಂಡಿರುವ ಕಳ್ಳಭಟ್ಟಿ ಸಾರಾಯಿಯನ್ನು ಟ್ಯೂಬಿನ ಸಮೇತ ನಾಶಪಡಿಸಲು ಹಾಗೂ ಖಾಲಿ ಕ್ಯಾನನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ಕಲಂ 43ಎ(4) ರನ್ವಯ ಅಬಕಾರಿ ನಿರೀಕ್ಷಕರು ಹೊನ್ನಾವರ ವಲಯ ಇವರಿಗೆ ಆದೇಶಿಸಿದ್ದೇನೆ.

ವಾಹನಕ್ಕೆ ಸಂಬಂಧಿಸಿದಂತೆ ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

ಈ ಆದೇಶವನ್ನು ಇಂದು ಅಂದರೆ 2004ನೇ ಇಸ್ವಿಯ ಮಾರ್ಚ್ ತಿಂಗಳ 31ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ ನಂತರ ಬೆರಳಚ್ಚು ಮಾಡಿಸಿ, ಬೆರಳಚ್ಚಿಸಿದ ಪ್ರತಿಯನ್ನು ತಿದ್ದಿ ಗಣಕೀಕೃತಗೊಳಿಸಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಕೆ.ಸಿ. ಹರಿದಾಸ್**
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ - 1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

| | |
|---|---|
| ಪ್ರಾ.ಸಾ. ನಂ. 1 | ಮಂಜುನಾಥ ವೀರಭದ್ರ ನಾಯ್ಕ |
| ಪ್ರಾ.ಸಾ. ನಂ. 2 | ಮಂಜುನಾಥ ಲಕ್ಷ್ಮಣ ನಾಯ್ಕ |
| ಪ್ರಾ.ಸಾ. ನಂ. 3 | ಜಿ.ಎಫ್. ನಾಯ್ಕ, ಪಿ.ಎಸ್.ಐ. |
| ಪ್ರಾ.ಸಾ. ನಂ. 4 | ಅನಿಲ್ ರಾಮಚಂದ್ರ ನಾಯ್ಕ, ಪಿ.ಸಿ. |

**ಅನುಬಂಧ - 2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

| | |
|---|---|
| ಡಿ.ಡಬ್ಲ್ಯೂ. 1 | ನಜೀರ್ ಮೊಹಿದ್ದೀನ ಶೇಖ್ |

**ಅನುಬಂಧ - 3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

| | |
|---|---|
| ನಿಶಾನೆ ಪಿ1 | ಪಂಚನಾಮೆ |
| ನಿಶಾನೆ ಪಿ1ಎ | ಫಿರ್ಯಾದುದಾರರ ಸಹಿ |
| ನಿಶಾನೆ ಪಿ2 | ಪ್ರ.ಮಾ. ವರದಿ |
| ನಿಶಾನೆ ಪಿ2ಎ | ಪ್ರ.ಮಾ. ವರದಿಯ ಮೇಲಿನ ಸಹಿ |
| ನಿಶಾನೆ ಪಿ3 | ಸ್ವತ್ತಿನ ಪಟ್ಟಿ |
| ನಿಶಾನೆ ಪಿ3ಎ | ಫಿರ್ಯಾದುದಾರರ ಸಹಿ |
| ನಿಶಾನೆ ಪಿ4 | ರಾಸಾಯನಿಕ ವಿಶ್ಲೇಷಣಾ ವರದಿ |
| ನಿಶಾನೆ ಪಿ4ಎ | ತನಿಖಾಧಿಕಾರಿಯ ಸಹಿ |

**ಕೆ.ಸಿ. ಹರಿದಾಸ್**

ಪಿ.ಆರ್. 568

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಸಹಕಾರ ಸಂಘಗಳ ಉಪ ನಿಬಂಧಕರು - 1, ಬೆಂಗಳೂರು ನಗರ ಜಿಲ್ಲೆ, ಚಾಮರಾಜಪೇಟೆ,**
**ಬೆಂಗಳೂರು - 18 ಇವರ ಕಾರ್ಯಾಲಯ**

**ಕ್ರಮಾಂಕ: ಡಿಆರ್‌ಬಿ - 1: ನೋಂ.ರದ್ದತಿ:02:2001 - 02, ದಿನಾಂಕ: 30ನೇ ಮಾರ್ಚ್ 2004**

**ವಿಷಯ:** ಸಮಾಪನೆಯಲ್ಲಿರುವ ಆಂಧ್ರ ಕ್ಷತ್ರಿಯ ಬಳಕೆದಾರರ ಸಹಕಾರ ಸಂಘ ನಿ., ಮಲ್ಲೇಶ್ವರಂ, ಬೆಂಗಳೂರು, ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ:** 1) ಇದೇ ಕಛೇರಿ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ-1:ಎಲ್‌ಕ್ಯೂಡಿ:34:2000-01, ದಿನಾಂಕ: 31.3.2001.

2) ಸಮಾಪನಾಧಿಕಾರಿ ದಕ್ಷಿಣ-1, ಇವರ ಪತ್ರ ದಿ: 27.2.2004.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಸನಿಬೆ: 44:ಸಮಾಪನೆ:25:2003-04, ದಿ: 6.3.2004.

**ಪ್ರಸ್ತಾವನೆ:-**

ಆಂಧ್ರ ಕ್ಷತ್ರಿಯ ಬಳಕೆದಾರರ ಸಹಕಾರ ಸಂಘ ನಿ., ಮಲ್ಲೇಶ್ವರಂ, ಬೆಂಗಳೂರು, ಈ ಸಂಘವು ನೋಂದಣಿ ಸಂಖ್ಯೆ: ಎಆರ್‌ಬಿ-1/108/64-65, ದಿನಾಂಕ: 21.10.1964 ರನ್ವಯ ನೋಂದಣಿಯಾಗಿದ್ದು ಹಲವಾರು ವರ್ಷಗಳಿಂದ ಈ ಸಂಘವು ಯಾವುದೇ ಕೆಲಸ ನಿರ್ವಹಿಸದೆ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಇದೇ ಕಛೇರಿ ಆದೇಶದಲ್ಲಿ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 72 ರಡಿಯಲ್ಲಿ ಸಮಾಪನೆಗೊಳಿಸಿ ಆದೇಶ ಹೊರಡಿಸಿ ಸಹಕಾರ ಸಂಘಗಳ ನಿರೀಕ್ಷಕರು ದಕ್ಷಿಣ-1 ಇವರನ್ನು ಸಮಾಪನಾಧಿಕಾರಿಯವರನ್ನಾಗಿ ನೇಮಕಮಾಡಲಾಗಿತ್ತು.

ಉಲ್ಲೇಖ (2) ರಲ್ಲಿ ಸಂಘದ ಸಮಾಪನಾಧಿಕಾರಿಗಳು ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಠರಾವು ಮಾಡಿ ಶಿಫಾರಸ್ಸು ಮಾಡಿರುವಂತೆ ಉಲ್ಲೇಖ (3) ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ ಬೆಂಗಳೂರು ಇವರು ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಗಿನ ಕಾರಣಗಳನ್ನು ನೀಡಿ ಈ ಕಚೇರಿಗೆ ಶಿಫಾರಸ್ಸು ಮಾಡಿರುತ್ತಾರೆ.

1. ಈ ಸಂಘವು ನೋಂದಾಯಿತ ವಿಳಾಸದಲ್ಲಿ ಅಥವಾ ಇನ್ನಾವುದೇ ವಿಳಾಸದಲ್ಲಿ ಕಾರ್ಯನಿರ್ವಹಿಸದೇ ಅಸ್ಥಿತ್ವದಲ್ಲಿಲ್ಲದ ಕಾರಣ ಈ ಸಂಘದ ಲೆಕ್ಕ ಪುಸ್ತಕಗಳನ್ನು ಪ್ರಭಾರ ವಹಿಸಿಕೊಳ್ಳಲು ಸಾಧ್ಯವಾಗದೇ ಇದ್ದ ಕಾರಣ ಸಂಘದ ಸಮಾಪನಾಧಿಕಾರಿಗಳು ಈ ಸಂಘದ ಸಮಾಪನಾಧಿಕಾರಿಯಾಗಿ ಸ್ವಯಂಪ್ರಭಾರ ವಹಿಸಿಕೊಂಡಿರುತ್ತಾರೆ.
2. ಈ ಸಂಘವು ಸರ್ಕಾರದಿಂದ ಪಡೆದಿದ್ದ ರೂ. 10,000/- ಷೇರು ಮೊಬಲಗನ್ನು ಸಮಾಪನಾಧಿಕಾರಿಗಳು ದಿನಾಂಕ: 6.11.2001 ರಂದು ಸರ್ಕಾರಕ್ಕೆ ಮರುಪಾವತಿ ಮಾಡಿರುತ್ತಾರೆ.
3. ಲೆಕ್ಕ ಪರಿಶೋಧನಾ ಇಲಾಖೆಯು ಈ ಸಂಘದ 97-98ನೇ ಸಾಲಿನ ಲೆಕ್ಕ ಪರಿಶೋಧನೆ ನಡೆಸಿದ್ದು ಇದರಂತೆ ಸಂಘದ ಸದಸ್ಯರಿಗೆ ರೂ. 13,571.00 ಗಳ ಷೇರು ಹಣವನ್ನು ಪಾವತಿಸಬೇಕಿದ್ದು, ಈ ಸಂಘದ ನೈಜ ಸದಸ್ಯರು ಲಭ್ಯವಿಲ್ಲದೆ ಇದ್ದಕಾರಣ ಈ ಹಣವನ್ನು ಪಾವತಿಸಲು ಸಾಧ್ಯವಾಗಿರುವುದಿಲ್ಲವೆಂದು ಸಮಾಪನಾಧಿಕಾರಿಗಳು ತಿಳಿಸಿರುತ್ತಾರೆ.
4. ಈ ಸಂಘದ ಖಾತೆಯಲ್ಲಿ ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಹಕಾರಿ ಬ್ಯಾಂಕಿನಲ್ಲಿ ಇದ್ದ ರೂ. 26,000/- ಗಳನ್ನು ಸಹಕಾರ ಸಂಘಗಳ ಉಪ ನಿಬಂಧಕರು-1 ಇವರ ಸಮಾಪನಾ ಸಹಕಾರ ಸಂಘಗಳ ಪಿ.ಡಿ. ಖಾತೆಗೆ ವರ್ಗಾಯಿಸಿರುವುದಾಗಿ ತಿಳಿಸಿರುತ್ತಾರೆ.
5. ಹಾಲಿ ಈ ಸಂಘದಿಂದ ಸರ್ಕಾರಕ್ಕೆ ಯಾವುದೇ ಬಾಕಿ ಇಲ್ಲದೇ ಇರುವುದರಿಂದ ಮತ್ತು ಆಸ್ತಿ ಹಾಗೂ ಜವಾಬ್ದಾರಿಗಳು ಲಭ್ಯವಿಲ್ಲದೇ ಇರುವುದರಿಂದ ಇದನ್ನು ರದ್ದುಪಡಿಸುವುದು ಸೂಕ್ತವೆಂದು ಸಮಾಪನಾಧಿಕಾರಿ ಕೋರಿರುತ್ತಾರೆ.

ಮೇಲಿನ ಅಂಶಗಳನ್ನು ವಿವರಿಸಿ ಸಮಾಪನಾಧಿಕಾರಿಗಳು ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಕೋರಿದ್ದಾರೆಂದು ಸಹಾಯಕ ನಿಬಂಧಕರು ವಿವರಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಿದಲ್ಲಿ ಸಾರ್ವಜನಿಕರಿಗಾಗಲೀ, ಸದಸ್ಯರಿಗಾಗಲೀ, ಸರ್ಕಾರಕ್ಕಾಗಲೀ ಯಾವುದೇ ನಷ್ಟ ಉಂಟಾಗುವುದಿಲ್ಲವೆಂದು ತಿಳಿಸಿ ಈ ಸಂಘದ ನೋಂದಣಿಯನ್ನು ಮುಂದುವರಿಸಿಕೊಂಡು ಹೋಗುವುದರಿಂದ ಪ್ರಯೋಜನವಿಲ್ಲದ ಕಾರಣ ರದ್ದುಪಡಿಸಿ ಆದೇಶ ಹೊರಡಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:243:ಸಿಎಲ್‌ಎಂ:91, ದಿನಾಂಕ: 4.5.94 ಮತ್ತು 13.1.97 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕೆ.ಎ. ಕುಮಾರ್, ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ನೋಂದಣಿ ಸಂಖ್ಯೆ: ಎಆರ್‌ಬಿ-1/108/64-65, ದಿನಾಂಕ: 21.10.1964 ರಲ್ಲಿ ನೋಂದಣಿಯಾದ ಆಂಧ್ರ ಕ್ಷತ್ರಿಯ ಬಳಕೆದಾರರ ಸಹಕಾರ ಸಂಘ ನಿ., ಮಲ್ಲೇಶ್ವರಂ, ಬೆಂಗಳೂರು, ಈ ಸಂಘದ ನೋಂದಣಿಯನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ. ಈ ದಿನದಿಂದ ಈ ಸಂಘವು ಕಾರ್ಪೊರೇಟ್ ಬಾಡಿಯಾಗಿರುವ ಅಸ್ತಿತ್ವವನ್ನು ಕಳೆದುಕೊಂಡಿದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಮತ್ತು ಈ ಕಛೇರಿಯ ಮೊಹರಿನೊಂದಿಗೆ ಈ ದಿನ ಅಂದರೆ ದಿನಾಂಕ: 30.3.2004 ರಂದು ಹೊರಡಿಸಲಾಗಿದೆ.

ಪಿ.ಆರ್. 569 ಸಹಕಾರ ಸಂಘಗಳ ಉಪ ನಿಬಂಧಕರು-1 ಬೆಂಗಳೂರು ನಗರ ಜಿಲ್ಲೆ.

**ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಚಾಮರಾಜಪೇಟೆ, ಬೆಂಗಳೂರು-18 ಇವರ ಕಾರ್ಯಾಲಯ**

**ಕ್ರಮಾಂಕ: ಡಿಆರ್‌ಬಿ-1: ನೋಂ.ರದ್ದತಿ:35:2003-04, ದಿನಾಂಕ: 30ನೇ ಮಾರ್ಚ್ 2004**

**ವಿಷಯ:** ಸಮಾಪನೆಯಲ್ಲಿರುವ ಅನ್ನಪೂರ್ಣೇಶ್ವರಿ ಮಹಿಳಾ ವಿವಿದೋದ್ದೇಶ ಸಹಕಾರಿ ಸಂಘ ನಿ., ಜೆ.ಸಿ. ನಗರ, ಬೆಂಗಳೂರು, ಇದರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಇದೇ ಕಛೇರಿ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ-1:ಎಲ್‌ಕ್ಯೂಡಿ:10:99-2000, ದಿನಾಂಕ: 30.11.1999.

2) ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂ.ಉ.ತಾ ಇವರ ಪತ್ರ ದಿನಾಂಕ: 28.2.2004.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಸನಿಬೆ: 44:ಸಮಾಪನೆ:26:2003-04, ದಿ: 6.3.2004.

**ಪ್ರಸ್ತಾವನೆ:-**

ಅನ್ನಪೂರ್ಣೇಶ್ವರಿ ಮಹಿಳಾ ವಿವಿದೋದ್ದೇಶ ಸಹಕಾರಿ ಸಂಘ ನಿ., ಜೆ.ಸಿ. ನಗರ, ಬೆಂಗಳೂರು, ಈ ಸಂಘವು ನೋಂದಣಿ ಸಂಖ್ಯೆ: ಎಆರ್‌ಬಿ-44/ಆರ್‌ಇಜಿಎನ್/382/19753/93-94, ದಿನಾಂಕ: 7.3.1994 ರನ್ವಯ ನೋಂದಣಿಯಾಗಿದ್ದು ಹಲವಾರು ವರ್ಷಗಳಿಂದ ಈ ಸಂಘವು ಯಾವುದೇ ಕೆಲಸ ನಿರ್ವಹಿಸದೆ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಇದೇ ಕಛೇರಿ ಆದೇಶದಲ್ಲಿ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 72 ರಡಿಯಲ್ಲಿ ಸಮಾಪನೆಗೊಳಿಸಿ ಆದೇಶ ಹೊರಡಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯವರನ್ನಾಗಿ ನೇಮಕಮಾಡಲಾಗಿತ್ತು.

ಉಲ್ಲೇಖ (2) ರಲ್ಲಿ ಸಂಘದ ಸಮಾಪನಾಧಿಕಾರಿಗಳು ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಠರಾವು ಮಾಡಿ ಶಿಫಾರಸ್ಸು ಮಾಡಿರುವಂತೆ ಉಲ್ಲೇಖ (3) ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ ಬೆಂಗಳೂರು ಇವರು ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಗಿನ ಕಾರಣಗಳನ್ನು ನೀಡಿ ಈ ಕಚೇರಿಗೆ ಶಿಫಾರಸ್ಸು ಮಾಡಿರುತ್ತಾರೆ.

1. ಈ ಸಂಘವು ನೋಂದಾಯಿತ ವಿಳಾಸದಲ್ಲಿ ಅಥವಾ ಇನ್ನಾವುದೇ ವಿಳಾಸದಲ್ಲಿ ಕಾರ್ಯನಿರ್ವಹಿಸದೇ ಅಸ್ತಿತ್ವದಲ್ಲಿಲ್ಲದ ಕಾರಣ ಈ ಸಂಘದ ಲೆಕ್ಕ ಪುಸ್ತಕಗಳನ್ನು ಪ್ರಭಾರ ವಹಿಸಿಕೊಳ್ಳಲು ಸಾಧ್ಯವಾಗಿರುವುದಿಲ್ಲವೆಂದು ಸಮಾಪನಾಧಿಕಾರಿಗಳು ತಿಳಿಸಿರುತ್ತಾರೆ.
2. ಕಛೇರಿಯಲ್ಲಿನ ಲಭ್ಯ ದಾಖಲೆಗಳನ್ನು ಪರಿಶೀಲಿಸಲಾಗಿ ಈ ಸಂಘವು ಸರ್ಕಾರದಿಂದ ಯಾವುದೇ ಷೇರು ಅಥವಾ ಸಾಲವನ್ನು ಪಡೆದಿರುವುದಿಲ್ಲ.
3. ಲೆಕ್ಕ ಪರಿಶೋಧನಾ ಇಲಾಖೆಯಲ್ಲಿ ಈ ಸಂಘದ ಲೆಕ್ಕ ಪರಿಶೋಧನೆ ನಡೆಸಿರುವ ಬಗ್ಗೆ ಯಾವುದೇ ವರದಿಗಳು ದೊರಕಿರುವುದಿಲ್ಲ.
4. ಈ ಸಂಘವು ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಹಕಾರಿ ಬ್ಯಾಂಕಿನಲ್ಲಿ ಯಾವುದೇ ಖಾತೆಯನ್ನು ಹೊಂದಿರುವುದಿಲ್ಲ.

ಮೇಲಿನ ಅಂಶಗಳನ್ನು ವಿವರಿಸಿ ಸಮಾಪನಾಧಿಕಾರಿಗಳು ಈ ಸಂಘವು ಅಸ್ತಿತ್ವದಲ್ಲಿಲ್ಲದೇ ಇರುವುದರಿಂದ ಇದರ ನೋಂದಣಿಯನ್ನು ರದ್ದುಪಡಿಸಲು ಕೋರಿದ್ದಾರೆಂದು ಸಹಾಯಕ ನಿಬಂಧಕರು ವಿವರಿಸಿ ಈ ಸಂಘವು ಅಸ್ತಿತ್ವದಲ್ಲಿಲ್ಲದೇ ಇರುವುದರಿಂದ ಈ ಸಂಘದ ನೋಂದಣಿಯನ್ನು ರದ್ದುಪಡಿಸಿದಲ್ಲಿ ಸಾರ್ವಜನಿಕರಿಗಾಗಲೀ, ಸದಸ್ಯರಿಗಾಗಲೀ, ಸರ್ಕಾರಕ್ಕಾಗಲೀ ಯಾವುದೇ ನಷ್ಟ

ಉಂಟಾಗುವುದಿಲ್ಲವೆಂದು ತಿಳಿಸಿ ಈ ಸಂಘದ ನೋಂದಣಿಯನ್ನು ಮುಂದುವರಿಸಿಕೊಂಡು ಹೋಗುವುದರಿಂದ ಪ್ರಯೋಜನವಿಲ್ಲದ ಕಾರಣ ರದ್ದುಪಡಿಸಿ ಆದೇಶ ಹೊರಡಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:243:ಸಿಎಲ್ಎಂ:91, ದಿನಾಂಕ: 4.5.94 ಮತ್ತು 13.1.97 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕೆ.ಎ. ಕುಮಾರ್, ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ನೋಂದಣಿ ಸಂಖ್ಯೆ: ಎಆರ್‌ಬಿ-44/ಆರ್‌ಇಜಿಎನ್/382/19753/93-94, ದಿನಾಂಕ: 7.3.94 ರಲ್ಲಿ ನೋಂದಣಿಯಾದ ಅನ್ನಪೂರ್ಣೇಶ್ವರಿ ಮಹಿಳಾ ವಿವಿದೋದ್ದೇಶ ಸಹಕಾರಿ ಸಂಘ ನಿ., ಜೆ.ಸಿ. ನಗರ, ಬೆಂಗಳೂರು, ಈ ಸಂಘದ ನೋಂದಣಿಯನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ. ಈ ದಿನದಿಂದ ಈ ಸಂಘವು ಕಾರ್ಪೊರೇಟ್ ಬಾಡಿಯಾಗಿರುವ ಅಸ್ಥಿತ್ವವನ್ನು ಕಳೆದುಕೊಂಡಿದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಮತ್ತು ಈ ಕಛೇರಿಯ ಮೊಹರಿನೊಂದಿಗೆ ಈ ದಿನ ಅಂದರೆ ದಿನಾಂಕ: 30.3.2004 ರಂದು ಹೊರಡಿಸಲಾಗಿದೆ.

ಪಿ.ಆರ್. 570 ಸಹಕಾರ ಸಂಘಗಳ ಉಪ ನಿಬಂಧಕರು-1 ಬೆಂಗಳೂರು ನಗರ ಜಿಲ್ಲೆ.

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು, ಇವರ ಕಾರ್ಯಾಲಯದ ನಡವಳಿಕೆಗಳು**

**ನಂ. ಡಿಆರ್‌ಟಿ/ಎಲ್‌ಕ್ಯೂಡಿ/276/96-97, ದಿನಾಂಕ: 30ನೇ ಮಾರ್ಚ್ 2004**

**ವಿಷಯ:** ಸಮಾಪನೆಯಲ್ಲಿರುವ ಶ್ರೀ ವೆಂಕಟೇಶ್ವರ ಕೈಗಾರಿಕಾ ಸಹಕಾರ ಸಂಘ ನಿ., ಅಳಶೆಟ್ಟಿ ಕೆರೆ ಪಾಳ್ಯ, ತುಮಕೂರು ಇದರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಪತ್ರ ಸಂಖ್ಯೆ: ಸನಿತು-32/ಎಲ್‌ಕ್ಯೂಡಿ/94-95, ದಿ: 11.12.1996.

2) ಸಮಾಪನೆ ಆದೇಶ ಡಿಆರ್‌ಟಿ/ಎಲ್‌ಕ್ಯೂಡಿ/276/96-97, ದಿ: 30.12.1996.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಪತ್ರ ಸಂಖ್ಯೆ: ಸನಿತು-32/ಡಿಎಲ್‌ಎಸ್/54/ ದಿ: 29.3.2004.

**ಪ್ರಸ್ತಾವನೆ:-**

ಸಮಾಪನೆಯಲ್ಲಿರುವ ಶ್ರೀ ವೆಂಕಟೇಶ್ವರ ಕೈಗಾರಿಕಾ ಸಹಕಾರ ಸಂಘ ನಿ., ಅಳಶೆಟ್ಟಿ ಕೆರೆ ಪಾಳ್ಯ, ತುಮಕೂರು ಈ ಸಂಘವು ನೋಂದಣಿ ಸಂಖ್ಯೆ ಎಆರ್‌ಟಿ/ಆರ್‌ಸಿಎಸ್/1272/874/71-72, ದಿ: 23.3.1972 ಆಗಿದ್ದು ಸದರಿ ಸಂಘವು ಕಾರ್ಯಚಟುವಟಿಕೆ ನಡೆಸದೆ ಸ್ಥಗಿತಗೊಂಡಿದ್ದುದರ ಮೇರೆಗೆ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರು ಉಲ್ಲೇಖ (1)ರ ತಮ್ಮ ಪತ್ರ ದಿನಾಂಕ: 11.12.1996 ರಲ್ಲಿ ಸಮಾಪನೆಗೊಳಿಸಲು ಪ್ರಸ್ತಾವನೆ ಸಲ್ಲಿಸಿದ್ದರು. ಉಲ್ಲೇಖ (2)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ, ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಿಸಿ, ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವೆ ಸಲ್ಲಿಸಲು ಆದೇಶಿಸಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ವಹಿಸಿಕೊಂಡು ದಿ: 15.3.2001 ರ ಏಕೀಶ್ ಪತ್ರಿಕೆಯಲ್ಲಿ ಪತ್ರಿಕಾ ಪ್ರಕಟಣೆ ನೀಡಿರುತ್ತಾರೆ. ನೀಡಿದ ಕಾಲಾವಧಿಯೊಳಗೆ ಸಾರ್ವಜನಿಕರಿಂದಾಗಲಿ, ಸಂಘದ ಸದಸ್ಯರಿಂದಾಗಲಿ ಆಕ್ಷೇಪಣೆ ಬಂದಿರುವುದಿಲ್ಲ. ದಿನಾಂಕ: 1.3.2004 ರಂದು ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಇವರು ಋಣ ಸಮಾಪನಾಧಿಕಾರಿಗಳ ಸಭೆಯಲ್ಲಿ ನೀಡಿದ ಮೌಖಿಕ ಆದೇಶದಂತೆ ತುಮಕೂರು ತಾಲ್ಲೂಕು ಎಸ್‌ಸಿ/ಎಸ್‌ಟಿ ಗೃಹನಿರ್ಮಾಣ ಸಹಕಾರ ಸಂಘ ನಿ., ಈ ಸಂಘದ ಋಣ ಸಮಾಪನಾಧಿಕಾರಿಗಳಿಂದ ಒಟ್ಟು 15,000 ರೂ.ಗಳನ್ನು ಪಡೆದು ಚಲನ್ ಸಂಖ್ಯೆ 42 ದಿ: 26.3.2004 ರಲ್ಲಿ ಸರ್ಕಾರದ ಷೇರು ರೂ. 10,000/- ಮತ್ತು ಚಲನ್ ಸಂಖ್ಯೆ 41 ರಲ್ಲಿ ಸರ್ಕಾರದ ಸಾಲ 5,000/- ಗಳನ್ನು ಸರ್ಕಾರಕ್ಕೆ ಸಂದಾಯ ಮಾಡಿ ಪ್ರಸ್ತಾವೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಇವರಿಗೆ ಶೂನ್ಯ ಆಸ್ತಿ ಜವಾಬ್ದಾರಿ ತಃಖ್ತೆಯೊಂದಿಗೆ ಪ್ರಸ್ತಾವೆ ಸಲ್ಲಿಸಿದ್ದು, ಅದರಂತೆ ನೋಂದಣಿ ರದ್ಧತಿಗೆ ಪ್ರಸ್ತಾವೆಯನ್ನು ಉಲ್ಲೇಖ (3)ರ ಮೇರೆಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಪ್ರಯುಕ್ತ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ವೆಂಕಟೇಶ್ವರ ಕೈಗಾರಿಕಾ ಸಹಕಾರ ಸಂಘ ನಿ, ಅಳಶೆಟ್ಟಿ ಕೆರೆ ಪಾಳ್ಯ, ತುಮಕೂರು ಇದರ ನೋಂದಣಿ ಸಂಖ್ಯೆ ಎಆರ್‌ಟಿ/ಆರ್‌ಸಿ.ಎಸ್/1272/8/4/71-72 ದಿನಾಂಕ: 23.3.1972 ಇದನ್ನು ಮೊಹಮದ್ ಸಲೀಂ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಕಾಯಿದೆ 1959ರ ಕಲಂ 75ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69 ಸಿಎಲ್ಎಂ 2001 ದಿನಾಂಕ: 21.11.2001 ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ಸಂಘದ ನೋಂದಣಿಯನ್ನು ರದ್ದುಪಡಿಸಿರುತ್ತೇನೆ. ತತ್ಪರಿಣಾಮವಾಗಿ ಸಂಘವು ವಿಸರ್ಜನೆಗೊಂಡಿರುತ್ತದೆಂದು ಆದೇಶಿಸಿರುತ್ತೇನೆ.

ದಿನಾಂಕ: 30.3.2004 ರಂದು ನನ್ನ ಹಸ್ತಾಕ್ಷರ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿರುತ್ತೇನೆ.

**ಮೊಹಮದ್ ಸಲೀಂ**

ಪಿ.ಆರ್. 571 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು, ಇವರ ಕಾರ್ಯಾಲಯದ ನಡವಳಿಕೆಗಳು**

**ನಂ. ಡಿಆರ್‌ಟಿ/ಎಲ್‌ಕ್ಯೂಡಿ/70/97-98, ದಿನಾಂಕ: 29ನೇ ಮಾರ್ಚ್ 2004**

**ವಿಷಯ:** ಸಮಾಪನೆಯಲ್ಲಿರುವ ಚೌಡೇಶ್ವರಿ ರೇಷ್ಮೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ., ಮಾವಿನಕೆರೆ, ತುರುವೇಕೆರೆ ತಾಲ್ಲೂಕು ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ:**
1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಇವರ ಪತ್ರ ಸಂಖ್ಯೆ: ಸನಿತು-34/ಎಲ್‌ಕ್ಯೂಡಿ/ಸಿಆರ್-34/96-97, ದಿ: 29.10.1996.
2) ಈ ಕಛೇರಿ ನೋಟೀಸ್ ಸಂಖ್ಯೆ: ಡಿಆರ್‌ಟಿ/ಎಲ್‌ಕ್ಯೂಡಿ/63/96-97, ದಿ: 12.9.1997.
3) ಸಮಾಪನೆ ಆದೇಶ ಡಿಆರ್‌ಟಿ/ಎಲ್‌ಕ್ಯೂಡಿ/70/97-98, ದಿ: 13.11.97.
4) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಇವರ ಪತ್ರ ಸಂಖ್ಯೆ: ಸನಿ-34/ಎಂಕೆಟಿ/ಡಿಎಲ್‌ಎಸ್/2001-02, ದಿ: 29.5.2001.
5) ಈ ಕಛೇರಿಯ ಸಮಾಪನಾಧಿಕಾರಿ ಬದಲಿ ಆದೇಶ ಸಂಖ್ಯೆ: ಡಿಆರ್‌ಟಿ/ಎಲ್‌ಕ್ಯೂಡಿ/70/97-98, ದಿ: 30.7.2001.
6) ಸಹಕಾರ ಅಭಿವೃದ್ಧಿ ಅಧಿಕಾರಿ, ತುರುವೇಕೆರೆ ಇವರ ಪತ್ರ ಸಂಖ್ಯೆ: ಸ.ಅ.ಅ.ತು/951/2002-03, ದಿ: 26.2.2003.

**ಪ್ರಸ್ತಾವನೆ:-**

ಸಮಾಪನೆಯಲ್ಲಿರುವ ಚೌಡೇಶ್ವರಿ ರೇಷ್ಮೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ., ಮಾವಿನಕೆರೆ, ತುರುವೇಕೆರೆ ತಾಲ್ಲೂಕು ಈ ಸಂಘವು ನೋಂದಣಿ ಸಂಖ್ಯೆ: ಟಿಡಿಆರ್/1212/61-62, ದಿ: 20.3.62 ಆಗಿದ್ದು ಸದರಿ ಸಂಘವು ಕಾರ್ಯಚಟುವಟಿಕೆ ನಡೆಸದೆ ಸ್ಥಗಿತಗೊಂಡಿದ್ದುದರ ಮೇರೆಗೆ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಇವರು ಉಲ್ಲೇಖ (1) ರ ತಮ್ಮ ಪತ್ರ ದಿನಾಂಕ: 29.10.1996 ರಲ್ಲಿ ಸಮಾಪನೆಗೊಳಿಸಲು ಪ್ರಸ್ತಾವನೆ ಸಲ್ಲಿಸಿದ್ದರು. ಈ ಕಛೇರಿಯ ಉಲ್ಲೇಖ (2) ರ ಮೇರೆಗೆ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ನೋಟೀಸ್ ನೀಡಿ ಆಕ್ಷೇಪಣೆ ಸಲ್ಲಿಸಲು ಕಾಲಾವಕಾಶ ನೀಡಲಾಗಿತ್ತು. ತತ್ಸಂಬಂಧವಾಗಿ ಯಾವುದೇ ಸಮಜಾಯಿಸಿಯಾಗಲೀ ತಕರಾರುಗಳು ಆಕ್ಷೇಪಣೆ ಬಾರದಿದ್ದುದರಿಂದ ಉಲ್ಲೇಖ (3) ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ, ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಿಸಿ, ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಲು ಆದೇಶಿಸಲಾಗಿತ್ತು. ಹಾಗೂ ಉಲ್ಲೇಖ (4) ರ ಪತ್ರದಲ್ಲಿ ಸಮಾಪನಾಧಿಕಾರಿಗಳ ಪ್ರಭಾರವನ್ನು ಬದಲಾಯಿಸುವಂತೆ ಕೋರಿರುವುದರ ಮೇರೆಗೆ ಈ ಕಛೇರಿಯಿಂದ ಉಲ್ಲೇಖ (5)ರ ಆದೇಶದಲ್ಲಿ ಸಮಾಪನಾಧಿಕಾರಿಯನ್ನು ಬದಲಾಯಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ತುರುವೇಕೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಬದಲಿ ಆದೇಶವನ್ನು ನೀಡಲಾಗಿದ್ದು, ಅದರಂತೆ ನೋಂದಣಿ ರದ್ದತಿಗೆ ಪ್ರಸ್ತಾವೆಯನ್ನು ಉಲ್ಲೇಖ (6) ರ ಮೇರೆಗೆ ಸಹಕಾರ ಅಭಿವೃದ್ಧಿ ಅಧಿಕಾರಿ, ತುರುವೇಕೆರೆ ಇವರು ಶೂನ್ಯ ಆಸ್ತಿ ಜವಾಬ್ದಾರಿ ತಃಖ್ತೆಯೊಂದಿಗೆ ಪ್ರಸ್ತಾವೆ ಸಲ್ಲಿಸಿರುತ್ತಾರೆ. ಪ್ರಯುಕ್ತ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಚೌಡೇಶ್ವರಿ ರೇಷ್ಮೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ., ಮಾವಿನಕೆರೆ, ತುರುವೇಕೆರೆ ತಾಲ್ಲೂಕು ಇದರ ನೋಂದಣಿ ಸಂಖ್ಯೆ ಟಿಡಿಆರ್/1212/61-62 ದಿನಾಂಕ: 20.3.1962 ಇದನ್ನು ಮೊಹಮದ್ ಸಲೀಂ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರಿ ಕಾಯಿದೆ 1959ರ ಕಲಂ 75ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ.69 ಸಿಎಲ್‌ಎಂ 2001 ದಿನಾಂಕ: 21.11.2001 ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ಸಂಘದ ನೋಂದಣಿಯನ್ನು ರದ್ದುಪಡಿಸಿರುತ್ತೇನೆ. ತತ್ಪರಿಣಾಮವಾಗಿ ಸಂಘವು ವಿಸರ್ಜನೆಗೊಂಡಿರುತ್ತದೆಂದು ಆದೇಶಿಸಿರುತ್ತೇನೆ.

ದಿನಾಂಕ: 29.3.2004 ರಂದು ನನ್ನ ಹಸ್ತಾಕ್ಷರ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿರುತ್ತೇನೆ.

**ಮೊಹಮದ್ ಸಲೀಂ**

ಪಿ.ಆರ್. 572 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು, ಇವರ ಕಾರ್ಯಾಲಯದ ನಡವಳಿಕೆಗಳು**

**ನಂ. ಡಿಆರ್‌ಟಿ/ಎಲ್‌ಕ್ಯೂಡಿ/130/ಸಿಆರ್-31/99-2000, ದಿನಾಂಕ: 30ನೇ ಮಾರ್ಚ್ 2004**

**ವಿಷಯ:** ಸಮಾಪನೆಯಲ್ಲಿರುವ ಕೊರಟಗೆರೆ ಟೌನ್ ಮಹಿಳಾ ಗ್ರಾಹಕರ ವಿವಿಧೋದ್ದೇಶ ಸಹಕಾರ ಸಂಘ ನಿ., ಕೊರಟಗೆರೆ ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ:**
1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಪತ್ರ ಸಂಖ್ಯೆ: ಸನಿ-33/ಎಂಕೆಟಿ/ಆರ್‌ಎಸ್‌ಆರ್/ಡಿಎಲ್‌ಎಸ್/121/99-2000, ದಿ: 16.9.1999.

2) ಸಮಾಪನೆ ಆದೇಶ ಡಿಆರ್‌ಟಿ/ಎಲ್‌ಕ್ಯೂಡಿ/130/ಸಿಆರ್-131/99-2000 ದಿ: 2.11.1999.

3) ಸಮಾಪನಾಧಿಕಾರಿಗಳು ಮಹಿಳಾ ಗ್ರಾಹಕರ ವಿವಿಧೋದ್ದೇಶ ಸಹಕಾರ ಸಂಘ ನಿ., ಕೊರಟಗೆರೆ ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿ, ಕೊರಟಗೆರೆ ಇವರ ಪತ್ರ ಸಂಖ್ಯೆ: ಸ.ಅ.ಅ.ಕೊ. ಗೆರೆ/ಋ.ಸ/58/2003-04, ದಿ: 30.3.2004.

**ಪ್ರಸ್ತಾವನೆ:-**

ಸಮಾಪನೆಯಲ್ಲಿರುವ ಕೊರಟಗೆರೆ ಟೌನ್ ಮಹಿಳಾ ಗ್ರಾಹಕರ ವಿವಿದೋದ್ದೇಶ ಸಹಕಾರ ಸಂಘ ನಿ., ಕೊರಟಗೆರೆ ಈ ಸಂಘವು ನೋಂದಣಿ ಸಂಖ್ಯೆ: ಎಆರ್‌ಎಂ/133/ಎಂಕೆಟಿ/ಆರ್‌ಜಿಎನ್/ಆರ್‌ಜಿಎಸ್/12035/89-90 ದಿ: 26.8.90 ಆಗಿದ್ದು ಸದರಿ ಸಂಘವು ಕಾರ್ಯಚಟುವಟಿಕೆ ನಡೆಸದೆ ಸ್ಥಗಿತಗೊಂಡಿದ್ದುದರ ಮೇರೆಗೆ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರು ಉಲ್ಲೇಖ (1)ರ ತಮ್ಮ ಪತ್ರ ದಿನಾಂಕ: 16.9.1999 ರಲ್ಲಿ ಸಮಾಪನೆಗೊಳಿಸಲು ಪ್ರಸ್ತಾವನೆ ಸಲ್ಲಿಸಿದ್ದರು. ಸಂಘದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 28(ಎ)(5)ರ ಮೇರೆಗೆ ಆಡಳಿತಾಧಿಕಾರಿ ಕಾರ್ಯನಿರ್ವಹಿಸುತ್ತಿದ್ದು, ಸಂಘದ ಸದಸ್ಯರಿಗೆ ಸಂಘದ ವ್ಯವಹಾರದ ಬಗ್ಗೆ ಆಸಕ್ತಿ ಇಲ್ಲದೆ ಇರುವುದರಿಂದ, ಉಲ್ಲೇಖ (2)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ, ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಿಸಿ, ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಲು ಆದೇಶಿಸಲಾಗಿತ್ತು. ಸಂಘವು ಸರ್ಕಾರದಿಂದ 25000/- ರೂ.ಗಳ ಷೇರು ಹಣ ಪಡೆದಿದ್ದು ಈ ಷೇರು ಹಣವನ್ನು ಸಂಘದ ಸ್ಥಿರಾಸ್ತಿಯಾದ 50 x 40 ಅಡಿಗಳ ನಿವೇಶನವನ್ನು ಕಂಬದಹಳ್ಳಿ ಗ್ರಾಮ ಕೊರಟಗೆರೆ ತಾ: ಇಲ್ಲಿ ಹೊಂದಿದ್ದು ಇದನ್ನು ಈ ಕಛೇರಿಯ ಸಮ ಸಂಖ್ಯೆಯ ಪತ್ರದ ದಿ: 26.2.2004 ರ ಅನುಮತಿ ಮೇರೆಗೆ ಸಮಾಪನಾಧಿಕಾರಿಗಳು ವ್ಯವಸಾಯ ಸೇವಾ ಸಹಕಾರ ಸಂಘ ನಿ., ತುಂಬಾಡಿ ಬ್ಯಾಂಕಿಗೆ ದಿ: 26.3.2004 ರಂದು ರೂ. 20,000 ಗಳಿಗೆ ಮಾರಾಟ ಮಾಡಿ ಹಾಗೂ ಸಂಘದ ಹೆಸರಿನಲ್ಲಿ ಟಿಎಪಿಸಿಎಂಎಸ್‌ನಲ್ಲಿದ್ದ ರೂ. 6500 ಮುಂಗಡ ರೂ.ಗಳನ್ನು ಪಡೆದು ಸರ್ಕಾರದ ಷೇರು ಹಣ ರೂ. 25000 ಗಳನ್ನು ಚಲನ್ ಸಂಖ್ಯೆ 11 ರಲ್ಲಿ ದಿನಾಂಕ: 30.3.2004 ರಂದು ಮರುಪಾವತಿಗೆ ಹಾಗೂ ಸಂಘದ ಸ್ಥಿರಾಸ್ತಿಗಳನ್ನು ದಿನಾಂಕ: 27.3.2004 ರಂದು ಬಹಿರಂಗ ಹರಾಜಿಗೆ ಇಟ್ಟಿದ್ದು ಹರಾಜಿನಲ್ಲಿ ಯಾರು ಬಿಡ್ಡು ಮಾಡದೆ ಇದ್ದುದರಿಂದ ಈ ಚರಾಸ್ತಿಗಳನ್ನು ಟಿಎಪಿಸಿಎಂಎಸ್ ಲಿ. ಕೊರಟಗೆರೆ ಇದಕ್ಕೆ ಮುಫತ್ತಾಗಿ ಸಂಘದ ಅಧ್ಯಕ್ಷರಿಂದ ಪತ್ರ ಪಡೆದು ನೀಡಿರುತ್ತಾರೆ. ಸರ್ಕಾರಕ್ಕೆ 25000 ರೂ.ಗಳನ್ನು ಪಾವತಿಸಿ ಉಳಿದ ಮೊಬಲಗನ್ನು ಸಂಘದ ನಿವೇಶನ ನೋಂದಣಿ ಖರ್ಚು, ಕಂದಾಯ ಇತರೆ ಬಾಬ್ತುಗಳಿಗೆ ಖರ್ಚು ಮಾಡಿ ಸಂಘದ ಜಮಾ ಖರ್ಚು ಹೊಂದಾಣಿಕೆ ಮಾಡಿ ಸಂಘದ ಆಸ್ತಿ ಜವಾಬ್ದಾರಿ ತಃಖ್ತೆಯನ್ನು ಶೂನ್ಯಗೊಳಿಸಿ ನೋಂದಣಿ ರದ್ದತಿಗೆ ಪ್ರಸ್ತಾವೆಯನ್ನು ಉಲ್ಲೇಖ (3)ರ ಮೇರೆಗೆ ಸಮಾಪನಾಧಿಕಾರಿಗಳು ಕೊರಟಗೆರೆ ಟೌನ್ ಮಹಿಳಾ ಗ್ರಾಹಕರ ವಿವಿದೋದ್ದೇಶ ಸಹಕಾರ ಸಂಘ ನಿ., ಕೊರಟಗೆರೆ ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿ, ಕೊರಟಗೆರೆ, ಇವರು ಸಲ್ಲಿಸಿರುತ್ತಾರೆ. ಪ್ರಯುಕ್ತ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕೊರಟಗೆರೆ ಟೌನ್ ಮಹಿಳಾ ಗ್ರಾಹಕರ ವಿವಿದೋದ್ದೇಶ ಸಹಕಾರ ಸಂಘ ನಿ., ಕೊರಟಗೆರೆ ಇದರ ನೋಂದಣಿ ಸಂಖ್ಯೆ: ಎಆರ್‌ಎಂ/133/ಎಂಕೆಟಿ/ಆರ್‌ಜಿಎನ್/ಆರ್‌ಸಿಎಸ್/12035/89-90 ದಿ: 26.8.90 ಇದನ್ನು ಮೊಹಮದ್ ಸಲೀಂ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಕಾಯಿದೆ 1959ರ ಕಲಂ 75 ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ.69 ಸಿಎಲ್‌ಎಂ 2001 ದಿನಾಂಕ: 21.11.2001 ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ಸಂಘದ ನೋಂದಣಿಯನ್ನು ರದ್ದುಪಡಿಸಿರುತ್ತೇನೆ. ತತ್ಪರಿಣಾಮವಾಗಿ ಸಂಘವು ವಿಸರ್ಜನೆಗೊಂಡಿರುತ್ತದೆಂದು ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ: 30.3.2004 ರಂದು ನನ್ನ ಹಸ್ತಾಕ್ಷರ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿರುತ್ತೇನೆ.

**ಮೊಹಮದ್ ಸಲೀಂ**

ಪಿ.ಆರ್. 573 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು, ಇವರ ಕಾರ್ಯಾಲಯದ ನಡವಳಿಕೆಗಳು**

**ನಂ. ಡಿಆರ್‌ಟಿ/ಡಿಎಲ್‌ಎಸ್/236/ಸಿಆರ್/58/99-2000, ದಿನಾಂಕ: 31ನೇ ಮಾರ್ಚ್ 2004**

**ವಿಷಯ:** ಸಮಾಪನೆಯಲ್ಲಿರುವ ಹರಿಜನ/ಗಿರಿಜನ ಬಿದಿರು ಕಸುಬುದಾರರ ಕೈಗಾರಿಕಾ ಸಹಕಾರ ಸಂಘ ನಿ., ಚಿನಗ, ತುಮಕೂರು ತಾಲ್ಲೂಕು ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಪತ್ರ ಸಂಖ್ಯೆ: ಸನಿ-32/ಡಿಎಲ್‌ಎಸ್/254/99-2000, ದಿ: 6.1.2000.

2) ಸಮಾಪನೆ ಆದೇಶ ಡಿಆರ್‌ಟಿ/ಡಿಎಲ್‌ಎಸ್/236/ಸಿಆರ್-58/99-2000 ದಿ: 27.1.2000.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಪತ್ರ ಸಂಖ್ಯೆ: ಸನಿತು-32/ಡಿಎಲ್‌ಎಸ್/259/2003-04, ದಿ: 29.3.2004.

**ಪ್ರಸ್ತಾವನೆ:-**

ಸಮಾಪನೆಯಲ್ಲಿರುವ ಹರಿಜನ/ಗಿರಿಜನ ಬಿದಿರು ಕಸುಬುದಾರರ ಕೈಗಾರಿಕಾ ಸಹಕಾರ ಸಂಘ ನಿ., ಚಿನಗ ತುಮಕೂರು ತಾಲ್ಲೂಕು ಈ ಸಂಘವು ನೋಂದಣಿ ಸಂಖ್ಯೆ: ಜಿಕೈ/ಕೇ/ಸನಿ/ಆರ್‌ಎಸ್‌ಆರ್/21392/95-96, ದಿ: 24.4.1995 ಆಗಿದ್ದು ಸದರಿ ಸಂಘವು ಕಾರ್ಯಚಟುವಟಿಕೆ ನಡೆಸದೆ ಸ್ಥಗಿತಗೊಂಡಿದ್ದುದರ ಮೇರೆಗೆ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರು

ಉಲ್ಲೇಖ (1)ರ ತಮ್ಮ ಪತ್ರ ದಿನಾಂಕ: 6.1.2000 ರಲ್ಲಿ ಸಮಾಪನೆಗೊಳಿಸಲು ಪ್ರಸ್ತಾವನೆ ಸಲ್ಲಿಸಿದ್ದರು. ಸಂಘದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 28 (ಎ) (5) ರ ಮೇರೆಗೆ ಆಡಳಿತಾಧಿಕಾರಿ ಕಾರ್ಯನಿರ್ವಹಿಸುತ್ತಿದ್ದು, ಸಂಘದ ಸದಸ್ಯರಿಗೆ ಸಂಘದ ವ್ಯವಹಾರದ ಬಗ್ಗೆ ಆಸಕ್ತಿ ಇಲ್ಲದೆ ಇದ್ದುದರಿಂದ ಉಲ್ಲೇಖ (2)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ, ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಿಸಿ, ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಲು ಆದೇಶಿಸಲಾಗಿತ್ತು. ಸಂಘಕ್ಕೆ ಸರ್ಕಾರದಿಂದ ಷೇರು ರೂ. 5000/- ನೀಡಿದ್ದು ಸಂಘದ ಉಳಿತಾಯ ಖಾತೆಯಲ್ಲಿದ್ದ ರೂ. 2,775/- ಗಳು ಇದ್ದು ಅದನ್ನು ಚೆಕ್ ನಂ. 0536285, ದಿನಾಂಕ: 27.2.2004 ರಂದು ಪಡೆದು ಉಳಿದ ರೂ. 2225 ಗಳನ್ನು ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಇವರ ನಿರ್ದೇಶನದ ಮೇರೆಗೆ ತುಮಕೂರು ತಾಲ್ಲೂಕು ಹರಿಜನ / ಗಿರಿಜನ ಗೃಹ ನಿರ್ಮಾಣ ಸಹಕಾರ ಸಂಘ ನಿ., ಇದರ ಸಮಾಪನಾಧಿಕಾರಿಗಳಿಂದ ಪಡೆದು ಒಟ್ಟಿಗೆ ರೂ. 5000/- ಗಳನ್ನು ಚಲನ್ ನಂ. 72 ಮತ್ತು 40 ದಿನಾಂಕ: 29.3.2004 ರಂದು ಸಮಾಪನಾಧಿಕಾರಿಯವರು ಸರ್ಕಾರಕ್ಕೆ ಮರುಪಾವತಿಸಿದ್ದು ಸಂಘದಲ್ಲಿ ಯಾವುದೇ ಚರ ಸ್ಥಿರಾಸ್ತಿಗಳಿಲ್ಲವಾದ್ದರಿಂದ ಶೂನ್ಯ ಆಸ್ತಿ ಜವಾಬ್ದಾರಿ ತಃಖ್ತೆಯೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿದ್ದು ಅದರಂತೆ ನೋಂದಣಿ ರದ್ದತಿಗೆ ಪ್ರಸ್ತಾವನೆಯನ್ನು ಉಲ್ಲೇಖ (3)ರ ಮೇರೆಗೆ ಸಮಾಪನಾಧಿಕಾರಿ ಹಾಗೂ ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ತುಮಕೂರು ಇವರು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಇವರಿಗೆ ಸಲ್ಲಿಸಿದ್ದು, ಸದರಿ ಪ್ರಸ್ತಾವನೆಯನ್ನು ಸಹಾಯಕ ನಿಬಂಧಕರು, ತುಮಕೂರು ಇವರು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಪ್ರಯುಕ್ತ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹರಿಜನ/ಗಿರಿಜನ ಬಿದಿರು ಕಸುಬುದಾರರ ಕೈಗಾರಿಕಾ ಸಹಕಾರ ಸಂಘ ನಿ, ಚಿನಗ ತುಮಕೂರು ತಾಲ್ಲೂಕು ಇದರ ನೋಂದಣಿ ಸಂಖ್ಯೆ: ಜಿಕೈ/ಕೇ/ಸನಿ/ಆರ್ಎಸ್ಆರ್/21392/95-96, ದಿನಾಂಕ: 24.4.1995 ಇದನ್ನು ಮೊಹಮದ್ ಸಲೀಂ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರಿ ಕಾಯಿದೆ 1959ರ ಕಲಂ 75 ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69 ಸಿಎಲ್ಎಂ 2001 ದಿನಾಂಕ: 21.11.2001 ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ಸಂಘದ ನೋಂದಣಿಯನ್ನು ರದ್ದುಪಡಿಸಿರುತ್ತೇನೆ. ತತ್ಪರಿಣಾಮವಾಗಿ ಸಂಘವು ವಿಸರ್ಜನೆಗೊಂಡಿರುತ್ತದೆಂದು ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ: 31.3.2004 ರಂದು ನನ್ನ ಹಸ್ತಾಕ್ಷರ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿರುತ್ತೇನೆ.

**ಮೊಹಮದ್ ಸಲೀಂ**

ಪಿ.ಆರ್. 574 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು, ಇವರ ಕಾರ್ಯಾಲಯದ ನಡವಳಿಕೆಗಳು**

**ನಂ. ಡಿಆರ್‌ಟಿ/ಎಲ್‌ಕ್ಯೂಡಿ/893/8/2002-2003, ದಿನಾಂಕ: 29ನೇ ಮಾರ್ಚ್ 2004**

**ವಿಷಯ:** ಸಮಾಪನೆಯಲ್ಲಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಚಿರತಹಳ್ಳಿ, ಶಿರಾ ತಾಲ್ಲೂಕು ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ:**
1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಇವರ ಪತ್ರ ಸಂಖ್ಯೆ: ಸನಿ-33/ಸ್ಥಗಿತ/216/2001-02 ದಿ: 21.3.2002.
2) ಈ ಕಛೇರಿ ನೋಟೀಸ್ ಸಂಖ್ಯೆ: ಡಿಆರ್‌ಟಿ/ಎಲ್‌ಕ್ಯೂಡಿ/893/8/2002-03, ದಿ: 17.5.2003.
3) ಸಮಾಪನೆ ಆದೇಶ ಡಿಆರ್‌ಟಿ/ಎಲ್‌ಕ್ಯೂಡಿ/893/8/2002-03, ದಿನಾಂಕ: 18.6.2003.
4) ಸಮಾಪನಾಧಿಕಾರಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಚಿರತಹಳ್ಳಿ ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿ, ಶಿರಾ ಇವರ ಪತ್ರ ಸಂಖ್ಯೆ: ಸ.ಅ.ಅ/ಸಮಾಪನೆ/ಚಿಹ/2003-04, ದಿ: 27.3.2004.

**ಪ್ರಸ್ತಾವನೆ:-**

ಸಮಾಪನೆಯಲ್ಲಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಚಿರತಹಳ್ಳಿ, ಶಿರಾ ತಾಲ್ಲೂಕು, ಈ ಸಂಘವು ನೋಂದಣಿ ಸಂಖ್ಯೆ: ಸನಿ-33/ಆರ್ಎಸ್ಆರ್/ಜೆಓಕ್ಯೂ/26483/2000-01, ದಿ: 10.8.2000 ಆಗಿದ್ದು ಸದರಿ ಸಂಘವು ಕಾರ್ಯಚಟುವಟಿಕೆ ನಡೆಸದೆ ಸ್ಥಗಿತಗೊಂಡಿದ್ದುದರ ಮೇರೆಗೆ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರು ಉಲ್ಲೇಖ (1)ರ ತಮ್ಮ ಪತ್ರ ದಿನಾಂಕ: 21.3.2002 ರಲ್ಲಿ ಸಮಾಪನೆಗೊಳಿಸಲು ಪ್ರಸ್ತಾವನೆ ಸಲ್ಲಿಸಿದ್ದರು. ಈ ಕಛೇರಿಯ ಉಲ್ಲೇಖ (2)ರ ಮೇರೆಗೆ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ನೋಟೀಸ್ ನೀಡಿ ಆಕ್ಷೇಪಣೆ ಸಲ್ಲಿಸಲು ಕಾಲಾವಕಾಶ ನೀಡಲಾಗಿತ್ತು. ತತ್ಸಂಬಂಧವಾಗಿ ಯಾವುದೇ ಸಮಜಾಯಿಸಿಯಾಗಲೀ ತಕರಾರುಗಳು ಆಕ್ಷೇಪಣೆ ಬಾರದಿದ್ದುದರಿಂದ ಉಲ್ಲೇಖ (3)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ, ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಿಸಿ, ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಲು ಆದೇಶಿಸಲಾಗಿತ್ತು. ಅದರಂತೆ ನೋಂದಣಿ ರದ್ದತಿಗೆ ಪ್ರಸ್ತಾವೆಯನ್ನು ಉಲ್ಲೇಖ (4) ರ ಮೇರೆಗೆ ಸಮಾಪನಾಧಿಕಾರಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಚಿರತಹಳ್ಳಿ, ಶಿರಾ ತಾಲ್ಲೂಕು ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿ, ಶಿರಾ, ಇವರು ಸಲ್ಲಿಸಿರುತ್ತಾರೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಚಿರತಹಳ್ಳಿ, ಶಿರಾ ತಾಲ್ಲೂಕು ಇದರ ನೋಂದಣಿ ಸಂಖ್ಯೆ: ಸನಿ-33/ಆರ್ಎಸ್ಆರ್/ಜೆಓಕ್ಯೂ/26483/2000-01, ದಿನಾಂಕ: 10.8.2000 ಇದನ್ನು ಮೊಹಮದ್ ಸಲೀಂ ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರಿ ಕಾಯಿದೆ 1959ರ ಕಲಂ 75 ರ ಅನ್ವಯ ಹಾಗೂ

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69 ಸಿಎಲ್ಎಂ 2001 ದಿನಾಂಕ: 21.11.2001 ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ಸಂಘದ ನೋಂದಣಿಯನ್ನು ರದ್ದುಪಡಿಸಿರುತ್ತೇನೆ. ತತ್ಪರಿಣಾಮವಾಗಿ ಸಂಘವು ವಿಸರ್ಜನೆಗೊಂಡಿರುತ್ತದೆಂದು ಆದೇಶಿಸಿರುತ್ತೇನೆ.

ದಿನಾಂಕ: 29.3.2004 ರಂದು ನನ್ನ ಹಸ್ತಾಕ್ಷರ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿರುತ್ತೇನೆ.

ಮೊಹಮದ್ ಸಲೀಂ

ಪಿ.ಆರ್. 575 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು, ಇವರ ಕಾರ್ಯಾಲಯದ ನಡವಳಿಕೆಗಳು**

**ನಂ. ಡಿಆರ್‌ಟಿ/ಎಲ್‌ಕ್ಯೂಡಿ/891/7/2002-2003, ದಿನಾಂಕ: 29ನೇ ಮಾರ್ಚ್ 2004**

**ವಿಷಯ:** ಸಮಾಪನೆಯಲ್ಲಿರುವ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ., ಚಿಕ್ಕಹಳ್ಳಿ, ಪಾವಗಡ ತಾಲ್ಲೂಕು ಇದರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಇವರ ಪತ್ರ ಸಂಖ್ಯೆ: ಸನಿ-33/ಎಂಕೆಟಿ/ಸ್ಥಗಿತ/127/2001-02 ದಿ: 21.3.2002.

2) ಈ ಕಛೇರಿ ನೋಟೀಸ್ ಸಂಖ್ಯೆ: ಡಿಆರ್‌ಟಿ/ಎಲ್‌ಕ್ಯೂಡಿ/891/7/2002-03, ದಿ: 17.5.2002.

3) ಸಮಾಪನೆ ಆದೇಶ ಡಿಆರ್‌ಟಿ/ಎಲ್‌ಕ್ಯೂಡಿ/891/7/2002-03, ದಿನಾಂಕ: 29.8.2002.

4) ಸಮಾಪನಾಧಿಕಾರಿ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ., ಚಿಕ್ಕಹಳ್ಳಿ, ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿ, ಪಾವಗಡ ಇವರ ಪತ್ರ ಸಂಖ್ಯೆ: ಸ.ಅ.ಅ/ಸಮಾಪನೆ/ಚಿಹ/2003-04, ದಿ: 26.3.2004.

**ಪ್ರಸ್ತಾವನೆ:-**

ಸಮಾಪನೆಯಲ್ಲಿರುವ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ., ಚಿಕ್ಕಹಳ್ಳಿ, ಪಾವಗಡ ತಾಲ್ಲೂಕು, ಈ ಸಂಘವು ನೋಂದಣಿ ಸಂಖ್ಯೆ: ಎಆರ್‌ಎಂ/17837/91-92, ದಿನಾಂಕ: 23.10.91 ಆಗಿದ್ದು ಸದರಿ ಸಂಘವು ಕಾರ್ಯಚಟುವಟಿಕೆ ನಡೆಸದೆ ಸ್ಥಗಿತಗೊಂಡಿದ್ದುದರ ಮೇರೆಗೆ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರು ಉಲ್ಲೇಖ (1)ರ ತಮ್ಮ ಪತ್ರ ದಿನಾಂಕ: 21.3.2002 ರಲ್ಲಿ ಸಮಾಪನೆಗೊಳಿಸಲು ಪ್ರಸ್ತಾವನೆ ಸಲ್ಲಿಸಿದ್ದರು. ಈ ಕಛೇರಿಯ ಉಲ್ಲೇಖ (2)ರ ಮೇರೆಗೆ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ನೋಟೀಸ್ ನೀಡಿ ಆಕ್ಷೇಪಣೆ ಸಲ್ಲಿಸಲು ಕಾಲಾವಕಾಶ ನೀಡಲಾಗಿತ್ತು. ತತ್ಸಂಬಂಧವಾಗಿ ಯಾವುದೇ ಸಮಜಾಯಿಸಿಯಾಗಲೀ ತಕರಾರುಗಳು ಆಕ್ಷೇಪಣೆ ಬಾರದಿದ್ದುದರಿಂದ ಉಲ್ಲೇಖ (3)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ, ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಿಸಿ, ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವೆ ಸಲ್ಲಿಸಲು ಆದೇಶಿಸಲಾಗಿತ್ತು. ಅದರಂತೆ ನೋಂದಣಿ ರದ್ಧತಿಗೆ ಪ್ರಸ್ತಾವೆಯನ್ನು ಉಲ್ಲೇಖ (4) ರ ಮೇರೆಗೆ ಸಮಾಪನಾಧಿಕಾರಿ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ., ಚಿಕ್ಕಹಳ್ಳಿ ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿ, ಪಾವಗಡ, ಇವರು ಸಲ್ಲಿಸಿರುತ್ತಾರೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ., ಚಿಕ್ಕಹಳ್ಳಿ, ಪಾವಗಡ ತಾಲ್ಲೂಕು ಇದರ ನೋಂದಣಿ ಸಂಖ್ಯೆ: ಎಆರ್‌ಎಂ/17837/91-92, ದಿನಾಂಕ: 23.10.1991 ಇದನ್ನು ಮೊಹಮದ್ ಸಲೀಂ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರಿ ಕಾಯಿದೆ 1959ರ ಕಲಂ 75 ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69 ಸಿಎಲ್ಎಂ 2001 ದಿನಾಂಕ: 21.11.2001 ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ಸಂಘದ ನೋಂದಣಿಯನ್ನು ರದ್ದುಪಡಿಸಿರುತ್ತೇನೆ. ತತ್ಪರಿಣಾಮವಾಗಿ ಸಂಘವು ವಿಸರ್ಜನೆಗೊಂಡಿರುತ್ತದೆಂದು ಆದೇಶಿಸಿರುತ್ತೇನೆ.

ದಿನಾಂಕ: 29.3.2004 ರಂದು ನನ್ನ ಹಸ್ತಾಕ್ಷರ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿರುತ್ತೇನೆ.

ಮೊಹಮದ್ ಸಲೀಂ

ಪಿ.ಆರ್. 576 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು, ಇವರ ಕಾರ್ಯಾಲಯದ ನಡವಳಿಕೆಗಳು**

**ನಂ. ಡಿಆರ್‌ಟಿ/ಎಲ್‌ಕ್ಯೂಡಿ/6/2002-03, ದಿನಾಂಕ: 25ನೇ ಮಾರ್ಚ್ 2004**

**ವಿಷಯ:** ಸಮಾಪನೆಯಲ್ಲಿರುವ ಶ್ರೀ ಕಾಳಿದಾಸ ಉಣ್ಣೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ., ಮಲ್ಲೇನಹಳ್ಳಿ, ತುಮಕೂರು ತಾಲ್ಲೂಕು ಇದರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಪತ್ರ ಸಂಖ್ಯೆ: ಸನಿ-32/ಡಿಎಲ್ಎಸ್/108/2001-02 ದಿ: 21.1.2002.

2) ಈ ಕಛೇರಿಯ ನೋಟೀಸ್ ಸಂಖ್ಯೆ: ಡಿಆರ್‌ಟಿ/ಎಲ್‌ಕ್ಯೂಡಿ/6/2002-03, ದಿ: 17.5.2002.

3) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಟಿ/ಎಲ್‌ಕ್ಯೂಡಿ/6/2002-03, ದಿನಾಂಕ: 29.8.2002.

4) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಪತ್ರ ಸಂಖ್ಯೆ: ಸನಿತು-32/ಡಿಎಲ್ಎಸ್/25/2002-03, ದಿ: 15.3.2004.

**ಪ್ರಸ್ತಾವನೆ:-**

ಶ್ರೀ ಕಾಳಿದಾಸ ಉಣ್ಣೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ., ಮಲ್ಲೇನಹಳ್ಳಿ, ತುಮಕೂರು ತಾಲ್ಲೂಕು, ಈ ಸಂಘವು ನೋಂದಣಿ ಸಂಖ್ಯೆ: ಹೆಚ್‌ಸಿಎಸ್/ಹೆಚ್-6/21622/94-95, ದಿನಾಂಕ: 4.2.1995 ರಲ್ಲಿ ನೋಂದಣಿಯಾಗಿದ್ದು ಸದರಿ ಸಂಘವು ಕಾರ್ಯ ಚಟುವಟಿಕೆ ನಡೆಸದೇ ಸ್ಥಗಿತಗೊಂಡಿದ್ದರ ಮೇರೆಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರು ಉಲ್ಲೇಖ (1)ರ ತಮ್ಮ ಪತ್ರ ದಿನಾಂಕ: 21.1.2002 ರಲ್ಲಿ ಸಮಾಪನೆಗೊಳಿಸಲು ಪ್ರಸ್ತಾವನೆ ಸಲ್ಲಿಸಿದ್ದರು. ಈ ಕಛೇರಿಯ ಉಲ್ಲೇಖ (2) ರ ಪತ್ರದಲ್ಲಿ ಸದರಿ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ನೋಟೀಸ್ ನೀಡಿ ಆಕ್ಷೇಪಣೆ ಸಲ್ಲಿಸಲು ಅವಕಾಶ ನೀಡಲಾಗಿತ್ತು. ತತ್ಸಂಬಂಧವಾಗಿ ಯಾವುದೇ ಸಮಜಾಯಿಷಿಯಾಗಲಿ, ತಕರಾರುಗಳಾಗಲಿ ಆಕ್ಷೇಪಣೆ ಬಾರದ್ದರಿಂದ ಉಲ್ಲೇಖ (3)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ ಸಂಘಕ್ಕೆ ಮಾರಾಟಾಧಿಕಾರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ತುಮಕೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಸಂಘದ ಆಸ್ತಿ-ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಲು ಆದೇಶಿಸಲಾಗಿತ್ತು. ಸಂಘದ ಸಮಾಪನಾಧಿಕಾರಿ ಪತ್ರದಲ್ಲಿ ತಿಳಿಸಿರುವಂತೆ ಸಂಘದಲ್ಲಿ ಯಾವುದೇ ವ್ಯವಹಾರ ನಡೆದಿಲ್ಲವಾದ್ದರಿಂದ ಸಂಘದ ಲೆಕ್ಕ ಪರಿಶೋಧನೆ ಆಗಿರುವುದಿಲ್ಲ. ಈ ಬಗ್ಗೆ ದಿನಾಂಕ: 5.3.2004ರ ತುಮಕೂರು ಮಾಧ್ಯಮ ಕನ್ನಡ ದಿನಪತ್ರಿಕೆಯಲ್ಲಿ ಪ್ರಕಟಣೆ ನೀಡಿ 7 ದಿನಗಳೊಳಗಾಗಿ ಆಕ್ಷೇಪಣೆ ಸಲ್ಲಿಸಲು ಕಾಲಾವಕಾಶ ನೀಡಲಾಗಿದ್ದು, ನೀಡಿದ್ದ ಕಾಲಾವಧಿಯೊಳಗೆ ಸಂಘದ ಸದಸ್ಯರಿಂದಾಗಲೀ ಅಥವಾ ಸಾರ್ವಜನಿಕರಿಂದಾಗಲೀ, ಯಾವುದೇ ತಕರಾರುಗಳು ಲಿಖಿತವಾಗಿ ಆಕ್ಷೇಪಣೆಗಳು ಬಂದಿರುವುದಿಲ್ಲವಾದ್ದರಿಂದ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಿದ್ದು ಸದರಿ ಪ್ರಸ್ತಾವೆಯನ್ನು ಉಲ್ಲೇಖ (4)ರ ಮೇರೆಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಪ್ರಯುಕ್ತ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ತುಮಕೂರು ತಾಲ್ಲೂಕು ಶ್ರೀ ಕಾಳಿದಾಸ ಉಣ್ಣೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ., ಮಲ್ಲೇನಹಳ್ಳಿ, ಇದರ ನೋಂದಣಿ ಸಂಖ್ಯೆ: ಹೆಚ್‌ಸಿಎಸ್/ಹೆಚ್-6/21622/94-95 ದಿನಾಂಕ: 4.2.1995 ಇದನ್ನು ಮೊಹಮದ್ ಸಲೀಂ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69 ಸಿಎಲ್ಎಂ 2001 ದಿನಾಂಕ: 21.11.2001 ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ಸಂಘದ ನೋಂದಣಿಯನ್ನು ರದ್ದುಪಡಿಸಿ ಆದೇಶಿಸಿರುತ್ತೇನೆ. ತತ್ಪರಿಣಾಮವಾಗಿ ಸಂಘವು ವಿಸರ್ಜನೆಗೊಂಡಿರುತ್ತದೆಂದು ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ: 25.3.2004 ರಂದು ನನ್ನ ಹಸ್ತಾಕ್ಷರ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿರುತ್ತೇನೆ.

**ಮೊಹಮದ್ ಸಲೀಂ**

ಪಿ.ಆರ್. 577 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯವಾಹಿಗಳು**

**ವಿಷಯ:** ವ್ಯವಸಾಯ ಸೇವಾ ಸಹಕಾರ ಸಂಘ ನಿ., ಇಪ್ಪಾಡಿ, ಕುಣಿಗಲ್ ತಾ: ಇದನ್ನು ಪುನಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಾಪನಾ ಆದೇಶ ಸಂ. ಡಿಆರ್‌ಟಿ/ಡಿಎಲ್‌ಎಸ್/740/ಎಲ್‌ಕ್ಯೂಡಿ/60/2001-02, ದಿನಾಂಕ: 26.9.2003.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಪತ್ರ ಸಂ: ಸನಿ32/ಡಿಎಲ್‌ಎಸ್/124/2001-02, ದಿ: 25.3.2004.

**ಪ್ರಸ್ತಾವನೆ:-**

ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕಿನ ವ್ಯವಸಾಯ ಸೇವಾ ಸಹಕಾರ ಸಂಘ ನಿ., ಇಪ್ಪಾಡಿ, ಈ ಸಂಘವು ಕಾರ್ಯ ನಿರ್ವಹಿಸದೇ ಸ್ಥಗಿತಗೊಂಡಿದ್ದರಿಂದ ಉಲ್ಲೇಖ (1)ರ ರೀತ್ಯಾ ಈ ಕಛೇರಿಯ ಆದೇಶದ ಮೇರೆಗೆ ಸಂಘವನ್ನು ಸಮಾಪನೆಗೊಳಿಸಲಾಗಿತ್ತು. ಉಲ್ಲೇಖ (2) ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪ ವಿಭಾಗ, ತುಮಕೂರು ಇವರು ತಿಳಿಸಿರುವಂತೆ, ಮೇಲ್ವಿಚಾರಕರು, ಡಿಸಿಸಿ ಬ್ಯಾಂಕ್ ನಿ., ಶಾಖೆ ಕುಣಿಗಲ್ ಇವರು ತಿಳಿಸಿರುವಂತೆ ಸಂಘವು ಇದುವರೆಗೂ 3.72 ಲಕ್ಷ ಸಾಲ ನೀಡಿದ್ದು ಇದರ ವಸೂಲಾತಿಯು ಸಮಾಪನೆಗೊಂಡಿರುವುದರಿಂದ ಕಷ್ಟಕರವಾಗಿರುವುದರಿಂದಲೂ ಹಾಗೂ ಸಂಘದ ವ್ಯಾಪ್ತಿಯ ಗ್ರಾಮಸ್ಥರು ಸಂಘವನ್ನು ಪುನಃಶ್ಚೇತನಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರುರವರನ್ನು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಯುಕ್ತ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರುರವರು ಸದರಿ ಪ್ರಸ್ತಾವನೆಯನ್ನು ಈ ಕಛೇರಿಗೆ ಕಳುಹಿಸಿ ಸದರಿ ಸಂಘವನ್ನು ಪುನಃಶ್ಚೇತನಗೊಳಿಸಲು ಆದೇಶ ನೀಡಬೇಕೆಂದು ಕೋರಿರುತ್ತಾರೆ.

ಪ್ರಯುಕ್ತ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಆದೇಶ ನಂ. ಡಿಆರ್‌ಟಿ/ಡಿಎಲ್‌ಎಸ್/740/ಎಲ್‌ಕ್ಯೂಡಿ/60/2001-02, ದಿನಾಂಕ: 30ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಗಮನಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(3) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/2001, ದಿನಾಂಕ: 21.11.2001ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮೊಹಮದ್ ಸಲೀಂ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ವ್ಯವಸಾಯ ಸೇವಾ ಸಹಕಾರ ಸಂಘ ನಿ., ಇಪ್ಪಾಡಿ, ಕುಣಿಗಲ್ ತಾ: ಈ ಸಂಘವನ್ನು ಸಂಘದ ಸದಸ್ಯರ ಮತ್ತು ರೈತಾಪಿ ವರ್ಗದ ಜನರ ಹಾಗೂ ಸಾರ್ವಜನಿಕರ ಹಿತದೃಷ್ಟಿಯಿಂದ ಈ ಸಂಘವು ತನ್ನ ಕಾರ್ಯ ಚಟುವಟಿಕೆಗಳನ್ನು ಪುನರಾರಂಭಿಸಿ ಉತ್ತಮವಾಗಿ ಕಾರ್ಯ ನಿರ್ವಹಿಸುವಂತೆ ಅಗತ್ಯ ಕ್ರಮಗಳನ್ನು ಕೈಗೊಳ್ಳಲು ತಿಳಿಸಿ ಉಲ್ಲೇಖ (1)ರ ಸಮಾಪನಾ ಆದೇಶ ರದ್ದುಪಡಿಸಿ ಸಂಘವನ್ನು ಪುನಶ್ಚೇತನಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ: 30.3.2004 ರಂದು ನನ್ನ ಹಸ್ತಾಕ್ಷರ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿರುತ್ತೇನೆ.

**ಮೊಹಮದ್ ಸಲೀಂ**

ಪಿ.ಆರ್. 578 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

**ಗೃಹರಕ್ಷಕ ಹಾಗೂ ಪೌರರಕ್ಷಣಾ ಇಲಾಖೆ**

**ನಂ.1, ಅಣ್ಣಾಸ್ವಾಮಿ ಮೊದಲಿಯಾರ್ ರಸ್ತೆ, ಬೆಂಗಳೂರು–42**

**ಅಧಿಸೂಚನೆ ಸಂಖ್ಯೆ: ಎಡಿಎಂ(1)18/ಸಿಜಿಒ/2001–02 ದಿನಾಂಕ: 24ನೇ ಮಾರ್ಚ್ 2004**

**ವಿಷಯ:** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ದ 3(ಬಿ)ಯಡಿಯಲ್ಲಿನ ಉಪಶೀರ್ಷಿಕೆ (ii) (iii) ಹಾಗೂ (iv) ರ ಪ್ರಕಾರ ರಾಜ್ಯ ಹಾಗೂ ಜಿಲ್ಲಾ ಮಟ್ಟದಲ್ಲಿನ ಅಧಿಕಾರಿಗಳ ಮತ್ತು ನೌಕರರ ಕರ್ತವ್ಯದ ಬಗ್ಗೆ ಸಂಕ್ಷಿಪ್ತ ವಿವರಣೆ ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅವರು ಅನುಸರಿಸುವ ಕಾರ್ಯವಿಧಾನದ ಬಗ್ಗೆ ಮಾಹಿತಿ ಪ್ರಕಟಣೆ.

**ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ರ ನಿಯಮ 3(ಬಿ)(ii)ರ ರೀತ್ಯಾ ಇಲಾಖೆಯ ಅಧಿಕಾರಿಗಳು ಮತ್ತು ನೌಕರರ ಕರ್ತವ್ಯಗಳ ಸಂಕ್ಷಿಪ್ತ ವಿವರಣೆಗಳ ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅವರು ಅನುಸರಿಸುವ ಕಾರ್ಯ ವಿಧಾನ.**

1. **ಆರಕ್ಷಕ ಮಹಾ ನಿರ್ದೇಶಕರು ಹಾಗೂ ಗೃಹರಕ್ಷಕ ದಳದ ಮಹಾ ಸಮಾದೇಷ್ಟರು ಹಾಗೂ ನಿರ್ದೇಶಕರು ಪೌರರಕ್ಷಣೆ**

ಇಲಾಖೆಯ ಮುಖ್ಯಸ್ಥರಾದ ಆರಕ್ಷಕ ಮಹಾ ನಿರ್ದೇಶಕರು ಮತ್ತು ಗೃಹರಕ್ಷಕ ದಳದ ಮಹಾ ಸಮಾದೇಷ್ಟರು ಹಾಗೂ ನಿರ್ದೇಶಕರು, ಪೌರರಕ್ಷಣೆ ಇವರು ಇಲಾಖೆಯ ನಿಯಂತ್ರಣ ಹಾಗೂ ಮೇಲ್ವಿಚಾರಣೆ ಅಧಿಕಾರಿಗಳಾಗಿರುತ್ತಾರೆ. ಸರ್ಕಾರ ಕಾಲಕಾಲಕ್ಕೆ ನಿಗದಿಗೊಳಿಸಿದ ಅಧಿಕಾರ ವ್ಯಾಪ್ತಿಗೆ ಅನುಗುಣವಾಗಿ ಇಲಾಖೆಯ ಆಡಳಿತಾತ್ಮಕ ಹಾಗೂ ಹಣಕಾಸಿನ ವ್ಯವಹಾರಗಳಿಗೆ ಮಂಜೂರಾತಿ ನೀಡುವ ಪೂರ್ಣಾವಧಿಕಾರವನ್ನು ಹೊಂದಿರುತ್ತಾರೆ.

2. **ಐ.ಜಿ.ಪಿ ಹಾಗೂ ಅಪರ ಮಹಾ ಸಮಾದೇಷ್ಟರು, ಗೃಹರಕ್ಷಕ ದಳ ಹಾಗೂ ಅಪರ ನಿರ್ದೇಶಕರು, ಪೌರರಕ್ಷಣೆ.**

ಗೃಹರಕ್ಷಕ ಮತ್ತು ಪೌರರಕ್ಷಣಾ ಇಲಾಖೆಗೆ ಸಂಬಂಧಿಸಿದ ವಿಷಯಗಳಲ್ಲಿ ಇವರು ಇಲಾಖಾ ಮುಖ್ಯಸ್ಥರಿಗೆ ಸಹಾಯಕರಾಗಿರುತ್ತಾರೆ.

3. **ಉಪ ಮಹಾ ಸಮಾದೇಷ್ಟರು, ಗೃಹರಕ್ಷಕ ದಳ ಹಾಗೂ ಉಪ ನಿರ್ದೇಶಕರು, ಪೌರರಕ್ಷಣೆ.**

ಉಪ ಮಹಾ ಸಮಾದೇಷ್ಟರು, ಗೃಹರಕ್ಷಕ ದಳ ಇವರು ಸಿಬ್ಬಂದಿಗಳ ನಿಯಂತ್ರಣ ಹಿರಿಯ ಅಧಿಕಾರಿಗಳಾಗಿದ್ದು, ಮಾನ್ಯ ಕಮಾಂಡೆಂಟ್ ಜನರಲ್‌ರವರ ಅಧೀನದಲ್ಲಿ ಇಲಾಖೆಯ ಕರ್ತವ್ಯಗಳನ್ನು ಸುಸೂತ್ರವಾಗಿ ನಡೆಸಿಕೊಂಡು ಹೋಗುವ ಹೊಣೆಗಾರಿಕೆ ಇವರ ಮೇಲಿದ್ದು, ಇಲಾಖೆಯ ಆಡಳಿತ ಮತ್ತು ದಕ್ಷತೆಯ ಗುಣಮಟ್ಟವನ್ನು ಹೆಚ್ಚಿಸುವ ಹಾಗೂ ಸರ್ಕಾರದ ಯೋಜನೆಗಳನ್ನು ಅನುಷ್ಠಾನಗೊಳಿಸುವ ಜವಾಬ್ದಾರಿ ಅಧಿಕಾರಿಯಾಗಿರುತ್ತಾರೆ.

4. **ಸಮಾದೇಷ್ಟರು, ಗೃಹರಕ್ಷಕ ಹಾಗೂ ಪೌರ ರಕ್ಷಣಾ ತರಬೇತಿ ಮಹಾ ವಿದ್ಯಾಲಯ, ಬೆಂಗಳೂರು.**

ಸಮಾದೇಷ್ಟರು, ಗೃಹರಕ್ಷಕ ಹಾಗೂ ಪೌರ ರಕ್ಷಣಾ ತರಬೇತಿ ಮಹಾ ವಿದ್ಯಾಲಯದ ನಿಯಂತ್ರಣಾಧಿಕಾರಿಗಳಾಗಿದ್ದು, ತರಬೇತಿ ಮಹಾ ವಿದ್ಯಾಲಯವನ್ನು ಉತ್ತಮವಾಗಿ ನಡೆಸಿಕೊಂಡು ಹೋಗಲು ಜವಾಬ್ದಾರರಾಗಿರುತ್ತಾರೆ. ಗೃಹರಕ್ಷಕ ದಳದ ಮಹಾ ಸಮಾದೇಷ್ಟರು ಹಾಗೂ ಉಪ ಸಮಾದೇಷ್ಟರ ನಿರ್ದೇಶನಕ್ಕೆ ಒಳಪಟ್ಟು ಕಾರ್ಯ ನಿರ್ವಹಿಸುತ್ತಾರೆ. ವರ್ಷದಲ್ಲಿ ನಡೆಸಬೇಕಾದ ತರಬೇತಿ ಕಾರ್ಯಕ್ರಮ ಪಟ್ಟಿಯನ್ನು ತಯಾರಿಸುವುದು, ಕಾಲೇಜಿಗೆ ಅಗತ್ಯವಾದ ತರಬೇತಿ ಸಾಮಗ್ರಿಗಳ ಖರೀದಿ, ಕೇಂದ್ರ ಕಚೇರಿ ಕಟ್ಟಡ ಹಾಗೂ ವಾಚನಾಲಯದ ನಿರ್ವಹಣೆ, ಹೊರರಾಜ್ಯದಲ್ಲಿ ನಡೆಸಲ್ಪಡುವ ತರಬೇತಿಗೆ ಬೋಧಕರ ನಿಯೋಜನೆ, ರಾಷ್ಟ್ರೀಯ ಹಬ್ಬಗಳ ಆಚರಣೆಗೆ ವ್ಯವಸ್ಥೆ ಮಾಡುವುದು, ಗೃಹರಕ್ಷಕರ ತರಬೇತಿ ಭೋಜನಾಲಯದ ಉಸ್ತುವಾರಿ, ಮಾಡಲ್ ರೂಂ ಹಾಗೂ ಮೈದಾನದ ಸ್ವಚ್ಛತೆ ಕಾಪಾಡುವುದು ಸೇರಿದಂತೆ ತರಬೇತಿ ಕಾಲೇಜಿನ ಬೋಧಕ ವರ್ಗದವರು ಶಿಸ್ತು ಕಾಪಾಡಿಕೊಂಡು ಹೋಗಲು ತಿಳುವಳಿಕೆ ನೀಡುತ್ತಿರುತ್ತಾರೆ.

5. **ಉಪ ಸಮಾದೇಷ್ಟರು ತರಬೇತಿ ಮಹಾ ವಿದ್ಯಾಲಯ:**

ಗೃಹರಕ್ಷಕ ಹಾಗೂ ಪೌರ ರಕ್ಷಣಾ ತರಬೇತಿ ವಿದ್ಯಾಲಯದ ಉಸ್ತುವಾರಿ ನೋಡಿಕೊಳ್ಳಲು ಸಮಾದೇಷ್ಟರ ಅಧೀನದಲ್ಲಿ ಉಪ ಸಮಾದೇಷ್ಟರು ಕಾರ್ಯ ನಿರ್ವಹಿಸುತ್ತಿದ್ದಾರೆ.

6. **ಸಹಾಯಕ ಆಡಳಿತಾಧಿಕಾರಿಗಳು:**

ಕೇಂದ್ರ ಕಚೇರಿಯ ಎಲ್ಲಾ ವಿಭಾಗಗಳ ಕಡತವನ್ನು ಪರಿಶೀಲಿಸಿ ಮೇಲ್ಪಟ್ಟ ಅಧಿಕಾರಿಗಳಿಗೆ ತಮ್ಮ ಟಿಪ್ಪಣಿಯೊಂದಿಗೆ ಕಳುಹಿಸಲ್ಪಡುವ ಜವಾಬ್ದಾರಿ ಹೊಂದಿರುತ್ತಾರೆ. ಅಲ್ಲದೆ ಟಪಾಲು ಹಾಗೂ ಕಡತಗಳ ಬಾಕಿ ವಿವರದ ಪರಿಶೀಲನೆ ನಡೆಸುವ ಜವಾಬ್ದಾರಿ ಹೊಂದಿರುತ್ತಾರೆ.

7. **ಲೆಕ್ಕಾಧಿಕಾರಿಗಳು:**

ಕೇಂದ್ರ ಕಚೇರಿಯಲ್ಲಿ ರಾಜ್ಯ ಲೆಕ್ಕ ಪತ್ರ ಇಲಾಖೆಯಿಂದ ನಿಯೋಜನೆಗೊಂಡ ಒಬ್ಬ ಲೆಕ್ಕಾಧಿಕಾರಿಗಳು ಕರ್ತವ್ಯ ನಿರ್ವಹಿಸುತ್ತಿದ್ದು, ಎಲ್ಲಾ ಜಿಲ್ಲೆಗಳಿಂದ ಸ್ವೀಕೃತಗೊಂಡ ಪ್ರತಿಯೊಂದು ಬಿಲ್‌ಗಳನ್ನು ಪರಿಶೀಲಿಸಿ ಮೇಲು ರುಜುವಿಗೆ ಕಳುಹಿಸಿಕೊಡುತ್ತಾರೆ. ಅಲ್ಲದೆ ಎಲ್ಲಾ ಜಿಲ್ಲೆಗಳ ಲೆಕ್ಕ ತಪಾಸಣಾ ಕಾರ್ಯವನ್ನು ಕೈಗೊಳ್ಳುವ ಜವಾಬ್ದಾರಿ ಹೊಂದಿರುತ್ತಾರೆ. ಇಲಾಖೆಗೆ ವಿವಿಧ ಬಾಬ್ತುಗಳಲ್ಲಿ ಅವಶ್ಯಕತೆ ಇರುವ ಅನುದಾನದ ಬಿಡುಗಡೆ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುವುದು ಹಾಗೂ ಸರ್ಕಾರದಿಂದ ಬಿಡುಗಡೆಗೊಳಿಸಲಾದ ಅನುದಾನ ವೆಚ್ಚದ ಬಗ್ಗೆ ಸರ್ಕಾರಕ್ಕೂ ಹಾಗೂ ಇಲಾಖಾ ಮುಖ್ಯಸ್ಥರಿಗೂ ಮಾಹಿತಿ ನೀಡುವ ಜವಾಬ್ದಾರಿಯೊಂದಿಗೆ ಲೆಕ್ಕ ಪತ್ರ ವಿಭಾಗದ ನಿರ್ವಹಣಾ ಜವಾಬ್ದಾರಿಯು ಇವರ ಮೇಲಿರುತ್ತದೆ.

**8. ಅಧೀಕ್ಷಕರು:**

ಕೇಂದ್ರ ಕಚೇರಿಯ ಸಿಬ್ಬಂದಿ ವಿಭಾಗ, ಆಡಳಿತ ವಿಭಾಗ, ಉಗ್ರಾಣ ವಿಭಾಗ, ಲೆಕ್ಕಪತ್ರ ವಿಭಾಗ ಹಾಗೂ ಆಡಿಟ್ ವಿಭಾಗಗಳಿಗೆ ಸಂಬಂಧಿಸಿದಂತೆ ಒಟ್ಟು 5 ಜನ ಅಧೀಕ್ಷಕರು ಕೆಲಸ ನಿರ್ವಹಿಸುತ್ತಿದ್ದಾರೆ. ಹೀಗೆ ಕರ್ತವ್ಯ ನಿರ್ವಹಿಸುತ್ತಿರುವ ಅಧೀಕ್ಷಕರುಗಳು ಅವರಿಗೆ ವಹಿಸಲಾಗಿರುವ ವಿಭಾಗಗಳಿಗೆ ಸಂಬಂಧಿಸಿದ ಟಪಾಲುಗಳನ್ನು ಸ್ವೀಕರಿಸಿ, ಸಂಬಂಧಿಸಿದ ಕಾರ್ಯ ನಿರ್ವಾಹಕರಿಗೆ ವಿತರಿಸುವುದು, ವಿಷಯ ನಿರ್ವಾಹಕರು ಮಂಡಿಸಲಾಗುವ ಕಡತಗಳನ್ನು ಪರಿಶೀಲಿಸಿ ಟಿಪ್ಪಣಿಯೊಂದಿಗೆ ಮೇಲಧಿಕಾರಿಗಳಿಗೆ ಮಂಡಿಸುವುದು, ಅವರ ವಿಭಾಗಗಳಿಗೆ ಸಂಬಂಧಿಸಿದ ಮಾಹಿತಿ ಹಾಗೂ ಅಂಕಿ ಅಂಶಗಳನ್ನು ಅಧಿಕಾರಿಗಳಿಗೆ ಒದಗಿಸುವುದು ಹಾಗೂ ಅಧಿಕಾರಿಗಳು ವಹಿಸಿಕೊಡಲಾಗುವ ಇತರೇ ಕರ್ತವ್ಯಗಳನ್ನು ನಿರ್ವಹಿಸುವ ಜವಾಬ್ದಾರಿ ಹೊಂದಿರುತ್ತಾರೆ.

**9. ಪ್ರಥಮ:ದ್ವಿತೀಯ ದರ್ಜೆ ಸಹಾಯಕರು:**

ಕೇಂದ್ರ ಕಚೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಪ್ರಥಮ ದರ್ಜೆ ಸಹಾಯಕರು ಹಾಗೂ ದ್ವಿತೀಯ ದರ್ಜೆ ಸಹಾಯಕರು ಇವರುಗಳಿಗೆ ವಿವಿಧ ವಿಭಾಗಗಳ ಕೆಲಸ ಕಾರ್ಯಗಳನ್ನು ಹಂಚಿಕೆ ಮಾಡಲಾಗಿದ್ದು, ಅವರುಗಳಿಗೆ ಸಂಬಂಧಿಸಿದ ಟಪಾಲುಗಳನ್ನು ಸ್ವೀಕರಿಸಿ, ಪರಿಶೀಲಿಸಿ ಟಿಪ್ಪಣಿಯೊಂದಿಗೆ ಕಡತವನ್ನು ವಿಭಾಗದ ಅಧೀಕ್ಷಕರಿಗೆ ಮಂಡಿಸುವುದು. ಅವರಲ್ಲಿನ ಬಾಕಿ ಕಡತ ಟಪಾಲುಗಳ ವಿವರಗಳನ್ನು ನೀಡುವುದು ಹಾಗೂ ಅಧಿಕಾರಿಗಳು ವಹಿಸಲಾಗುವ ಇತರೆ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದ್ದಾರೆ.

**ಎಂ.ಡಿ.ಸಿಂಹ, ಐಪಿಎಸ್**
ಆರಕ್ಷಕ ಮಹಾ ನಿರ್ದೇಶಕರು, ಗೃಹರಕ್ಷಕ ದಳದ ಮಹಾ
ಸಮಾದೇಷ್ಟರು ಮತ್ತು ನಿರ್ದೇಶಕರು, ಪೌರರಕ್ಷಣೆ.

**ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000ರ ನಿಯಮ 3(ಬಿ)(iii)ರ ರೀತ್ಯಾ ಇಲಾಖೆಯ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ಪ್ರಾಧಿಕಾರವು ರೂಪಿಸಿರುವ ಗುಣಮಟ್ಟಗಳ ಪ್ರಕಟಣೆ.**

**ತರಬೇತಿ ಮಹಾ ವಿದ್ಯಾಲಯ:**

ಗೃಹರಕ್ಷಕ ಹಾಗೂ ಪೌರರಕ್ಷಣಾ ತರಬೇತಿ ಮಹಾ ವಿದ್ಯಾಲಯದ ನಿಯಂತ್ರಣಾಧಿಕಾರಿಗಳಾಗಿ ಸಮಾದೇಷ್ಟರು ಕಾರ್ಯ ನಿರ್ವಹಿಸುತ್ತಾರೆ. ವಿದ್ಯಾಲಯವು ಪೋಲೀಸ್ ಅಧೀಕ್ಷಕರು:ಮೇಜರ್ ಶ್ರೇಣಿಯನ್ನು ಒಳಗೊಂಡ ಸಮಾದೇಷ್ಟರ ಮೇಲ್ವಿಚಾರಣೆ ಹೊಂದಿದ್ದು, ಬೋಧಕ ಹಾಗೂ ಸೈನಿಕ ವೃಂದದವರು ಇವರಿಗೆ ಸಹಾಯಕರಾಗಿರುತ್ತಾರೆ. ಈ ತರಬೇತಿ ಸಂಸ್ಥೆಯು ಜಿಲ್ಲೆಗಳಿಂದ ಆಯ್ಕೆಗೊಂಡು ನಿಯೋಜಿತರಾದ ಗೃಹರಕ್ಷಕ ಸದಸ್ಯರಿಗೆ ಹಾಗೂ ಇತರೆ ಇಲಾಖೆಗಳ ಉದ್ಯೋಗಿಗಳಿಗೆ ವಿವಿಧ ವಿಷಯಗಳಾದ ರಕ್ಷಣೆ, ಪ್ರವಾಹ ರಕ್ಷಣೆ, ಅಗ್ನಿಶಮನ, ಬೋಧಕರು:ಸಹಾಯಕ ಬೋಧಕರ ಪುನರ್ ವ್ಯಾಸಂಗ ತರಬೇತಿ, ಅಂಶಕಾಲಿಕ ಬೋಧಕರ ತರಬೇತಿ, ಮುಂದಾಳತ್ವ ತರಬೇತಿ, ನಿಸ್ಸಂತು ತರಬೇತಿ, ಪ್ರಥಮ ಚಿಕಿತ್ಸೆ ತರಬೇತಿ ನೀಡಲಾಗುತ್ತಿದೆ.

**ಇಲಾಖೆಯ ಗುಣಮಟ್ಟ ಸುಧಾರಣೆಗಾಗಿ ಕೈಗೊಂಡಿರುವ ಕ್ರಮಗಳು:**

**ಗೃಹರಕ್ಷಕ ದಳ:**

**1. ಸಮಾದೇಷ್ಟರ ನೇಮಕಾತಿ:**

ಗೃಹರಕ್ಷಕ ಕಾಯ್ದೆ ಹಾಗೂ ನಿಯಮಗಳಿಗೆ ಅನುಗುಣವಾಗಿ ಗೌರವ ಸಮಾದೇಷ್ಟರುಗಳನ್ನು ನೇಮಕ ಮಾಡಲಾಗುತ್ತಿದ್ದು, ಸಮಾದೇಷ್ಟರ ಹುದ್ದೆಗಳು ಭರ್ತಿಯಾಗದ ಜಿಲ್ಲೆಗಳಲ್ಲಿ ವೇತನ ಪಡೆಯುವ ಉಪ ಸಮಾದೇಷ್ಟರುಗಳ ಪ್ರಭಾರ ಸಮಾದೇಷ್ಟರ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿರುತ್ತಾರೆ.

**2. ಗೃಹರಕ್ಷಕ ಸಂಖ್ಯಾಬಲವನ್ನು ಪೂರ್ಣ ಪ್ರಮಾಣದಲ್ಲಿ ಭರ್ತಿ ಮಾಡುವುದು:**

ರಾಜ್ಯದಲ್ಲಿನ ಒಟ್ಟು ಗೃಹರಕ್ಷಕ ಸಂಖ್ಯಾಬಲವನ್ನು 18700ಕ್ಕೆ ನಿಗದಿಗೊಳಿಸಲಾಗಿದ್ದು, ಪ್ರಸ್ತುತ ವಾಸ್ತವಿಕ ಸಂಖ್ಯಾಬಲ 17497 ಇರುತ್ತದೆ. ಪೂರ್ಣ ಪ್ರಮಾಣದಲ್ಲಿ ಸಂಖ್ಯಾಬಲವನ್ನು ಭರ್ತಿಮಾಡಲು ಅಗತ್ಯ ಕ್ರಮ ಕೈಗೊಳ್ಳಲಾಗುತ್ತಿದೆ.

**3. ಕರ್ತವ್ಯ ನಿಯೋಜನೆ:**

ಕಾನೂನು ಮತ್ತು ಸುವ್ಯವಸ್ಥೆ ಕಾಪಾಡಲು, ಬಂದೋಬಸ್ತ್ ಕರ್ತವ್ಯ ಸಾರ್ವತ್ರಿಕ ಚುನಾವಣೆಗಳ ನಿರ್ವಹಣಾ ಬಂದೋಬಸ್ತ್, ಕಳವು, ಬೆಂಕಿ ಆರಿಸುವಿಕೆ, ಜಾತ್ರೆಗಳು ಮತ್ತು ಉತ್ಸವಗಳು, ಭೂಕಂಪ, ಪ್ರವಾಹ ಇವೇ ಮೊದಲಾದ ಸಂದರ್ಭಗಳಲ್ಲಿ ಪೋಲೀಸರೊಂದಿಗೆ ಬೆರೆತು ಕರ್ತವ್ಯ ನಿರ್ವಹಿಸಲು ಉತ್ತೇಜನ ನೀಡಲಾಗುತ್ತಿದೆ.

**4. ಜಿಲ್ಲಾ ಮಟ್ಟದಲ್ಲಿ ತರಬೇತಿ ಶಿಬಿರ:**

ಗೃಹರಕ್ಷಕರಿಗೆ ಹೆಚ್ಚಿನ ತಿಳುವಳಿಕೆ ಮೂಡಿಸಲು ಜಿಲ್ಲಾ ಮಟ್ಟದಲ್ಲಿ ಮೂಲ ಹಾಗೂ ವಾರ್ಷಿಕ ತರಬೇತಿ ಶಿಬಿರವನ್ನು ವ್ಯವಸ್ಥೆಗೊಳಿಸಲು ಅನುವು ಮಾಡಿಕೊಡಲಾಗಿದೆ.

**5. ಗೃಹರಕ್ಷಕರ ಕಲ್ಯಾಣ ನಿಧಿ:**

ಗೃಹರಕ್ಷಕರು ಹಾಗೂ ಅವರ ಮಕ್ಕಳ ವಿದ್ಯಾಭ್ಯಾಸ ಹಾಗೂ ವೈದ್ಯಕೀಯ ಚಿಕಿತ್ಸೆಗಾಗಿ ಗೃಹರಕ್ಷಕ ಕಲ್ಯಾಣ ನಿಧಿಯಿಂದ ಧನ ಸಹಾಯ ಮಾಡಲಾಗುತ್ತಿದೆ.

**6. ಅಧಿಕೃತ ಅಂತರ್‌ಜಾಲ ವೆಬ್ ಸೈಟ್:**

ಜನ ಸಾಮಾನ್ಯರು ಹಾಗೂ ಸರ್ಕಾರೇತರ ಸಂಸ್ಥೆಗಳು ಸುಲಭವಾಗಿ ಮಾಹಿತಿಯನ್ನು ಪಡೆಯಲು ಸಾಧ್ಯವಾಗುವಂತೆ ಅಧಿಕೃತ ಅಂತರ ಜಾಲ ವೆಬ್ ಸೈಟ್ ಒಂದನ್ನು ಈ ನಿರ್ದೇಶನಾಲಯದಲ್ಲಿ ಸೃಜಿಸಲಾಗಿದೆ.

**7. ಪದಕಗಳ ನೀಡಿಕೆ:**

ಇಲಾಖೆಯಲ್ಲಿನ ಗೌರವ ಗೃಹರಕ್ಷಕ ಅಧಿಕಾರಿಗಳಿಗೆ ಹಾಗೂ ಸಿಬ್ಬಂದಿ ವರ್ಗದವರಿಗೆ ಅವರ ವಿಶಿಷ್ಟ ಸೇವೆ ಹಾಗೂ ಶ್ಲಾಘನೀಯ ಸೇವೆಗಳನ್ನು ಪರಿಗಣಿಸಿ, ಗಣರಾಜ್ಯೋತ್ಸವ ಹಾಗೂ ಸ್ವಾತಂತ್ರ್ಯೋತ್ಸವ ಸಂದರ್ಭಗಳಲ್ಲಿ ರಾಷ್ಟ್ರಪತಿಗಳಿಂದ ಅನುಮೋದಿತ ಗೃಹರಕ್ಷಕ ಹಾಗೂ ಪೌರರಕ್ಷಣಾ ವಿಶಿಷ್ಠ ಸೇವಾ ಹಾಗೂ ಶ್ಲಾಘನೀಯ ಸೇವಾ ಪದಕಗಳನ್ನು ನೀಡಿ ಗೌರವಿಸಲಾಗುತ್ತಿದೆ.

**ಪೌರ ರಕ್ಷಣೆ:**

ಪೌರರಕ್ಷಣಾ ಸಂಸ್ಥೆಯು ಕರ್ನಾಟಕದಲ್ಲಿ 1963 ರಲ್ಲಿ ಅಸ್ಥಿತ್ವಕ್ಕೆ ಬಂದಿತು. ಇದು ಸ್ವಯಂ ಸೇವಕ ಸಂಸ್ಥೆಯಾಗಿದ್ದು, ಗೃಹರಕ್ಷಕ ಸಂಸ್ಥೆಯ ಮಾದರಿಯಲ್ಲಿಯೆ ರಚಿತಗೊಂಡಿದೆ. ಈ ಸಂಸ್ಥೆಯು ಪೌರರಕ್ಷಣಾ ಸ್ವಯಂ ಸೇವಕರನ್ನು ಹಾಗೂ ಅಲ್ಪ ಪ್ರಮಾಣದ ಪೂರ್ಣಕಾಲಿಕ ವೇತನ ಪಡೆಯುವ ಸಿಬ್ಬಂದಿಯನ್ನು ಒಳಗೊಂಡಿದೆ. ಸಂಸ್ಥೆಗೆ ಡಿಜಿಪಿ ಶ್ರೇಣಿಯ ನಿರ್ದೇಶಕರು ಮುಖ್ಯಸ್ಥರಾಗಿದ್ದು, ಇವರಿಗೆ ಡಿಜಿಪಿ ಶ್ರೇಣಿಯಲ್ಲಿ ಹೆಚ್ಚುವರಿ ನಿರ್ದೇಶಕರು ಹಾಗೂ ಎಸ್.ಪಿ.ಶ್ರೇಣಿಯ ಉಪ ನಿರ್ದೇಶಕರು ಹಾಗೂ ಇತರ ಅಧಿಕಾರಿ ಹಾಗೂ ಸಿಬ್ಬಂದಿಗಳು ಸಹಾಯಕರಾಗಿರುತ್ತಾರೆ.

ಸಂಸ್ಥೆಯ ನಿರ್ದೇಶಕರು, ಬೆಂಗಳೂರು ನಗರದ ಪೌರರಕ್ಷಣಾ ನಿಬಂಧಕರಾಗಿರುತ್ತಾರೆ. ಕರ್ನಾಟಕ ರಾಜ್ಯದಲ್ಲಿ ಬೆಂಗಳೂರು ನಗರ, ಉತ್ತರ ಕನ್ನಡ ಜಿಲ್ಲೆಯ ಮಲ್ಲಾಪುರ ಹಾಗೂ ರಾಯಚೂರು ಜಿಲ್ಲೆಯ ಶಕ್ತಿನಗರ ಪೌರರಕ್ಷಣಾ ಪಟ್ಟಣಗಳಾಗಿವೆ.

**ಪ್ರಾಧಿಕಾರ ರೂಪಿಸಿರುವ ಕಾರ್ಯಕ್ರಮಗಳು:**

1. ಇಲಾಖೆಯು ಸ್ವಯಂ ಸೇವಕರನ್ನು ಭರ್ತಿ ಮಾಡಿಕೊಂಡು ಅವರಿಗೆ ಮೂಲ ರಕ್ಷಣಾ ತರಬೇತಿ ಹಾಗೂ ಸಂಪರ್ಕ, ಅಗ್ನಿಶಾಮಕ ಸೇವೆ, ರೆಸ್ಕ್ಯೂ ಇವೇ ಮೊದಲಾದ ವಿಷಯಗಳಲ್ಲಿ ಪ್ರಗತಿ ಪರ ತರಬೇತಿ ನೀಡಲಾಗುತ್ತಿದೆ.
2. ಇಲಾಖೆಯು ಅರ್ಪಣಾ ಮನೋಭಾವವುಳ್ಳ ಸ್ವಯಂ ಸೇವಕರ ಮೂಲಕ ವಾಯುದಾಳಿ, ಯುದ್ಧ ಹಾಗೂ ಪ್ರಕೃತಿ ವಿಕೋಪ ಹಾಗೂ ಇನ್ನಿತರ ವಿಷಮ ಪರಿಸ್ಥಿತಿಗಳಲ್ಲಿ ನಾಗರಿಕರಿಗೆ ಸಹಾಯ ಒದಗಿಸುತ್ತದೆ.
3. ಇಲಾಖೆಯು ಜನ ಸಾಮಾನ್ಯರಿಗೆ ಭೂಕಂಪ, ಪ್ರವಾಹ, ಕಟ್ಟಡ ಕುಸಿತ, ಇವೇ ಮೊದಲಾದ ಸಂಕಷ್ಟಗಳ ಸನ್ನಿವೇಶದಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಪರಿಹಾರ ಒದಗಿಸಿ ರಕ್ಷಣೆಯನ್ನು ನೀಡುತ್ತದೆ.
4. ಆರೋಗ್ಯ ಇಲಾಖೆ, ಲೋಕೋಪಯೋಗಿ ಇಲಾಖೆ, ಅಗ್ನಿಶಾಮಕ ಸೇವಾ ಇಲಾಖೆ, ಮೊದಲಾದ ಇಲಾಖೆಗಳು ಹಾಗೂ ಸಮಾಜ ಸೇವಾ ಘಟಕಗಳನ್ನು ಸಂಘಟಿಸಿ ತುರ್ತು ಪರಿಸ್ಥಿತಿಗಳಲ್ಲಿ ಅತ್ಯಾವಶ್ಯಕ ಸೇವೆಯನ್ನು ಒದಗಿಸಲು ಸಹಕಾರ ನೀಡುತ್ತದೆ.
5. ಕರ್ನಾಟಕ ರಾಜ್ಯದಲ್ಲಿ ಪೌರರಕ್ಷಣಾ ಸಂಸ್ಥೆಯ ವ್ಯಾಪ್ತಿಯು ಬೆಂಗಳೂರು ನಗರ, ಉತ್ತರ ಕನ್ನಡ ಜಿಲ್ಲೆಯ ಮಲ್ಲಾಪುರ ಹಾಗೂ ರಾಯಚೂರು ಜಿಲ್ಲೆಯ ಶಕ್ತಿನಗರಕ್ಕೆ ಮಾತ್ರ ಸೀಮಿತಗೊಂಡಿದೆ.
6. ಇಲಾಖೆಯು ವ್ಯಾಪಕ ಪ್ರಚಾರವನ್ನು ಕೈಗೊಳ್ಳುವ ಮೂಲಕ ಸಂಸ್ಥೆಗೆ ಹೆಚ್ಚಿನ ಸಂಖ್ಯೆಯಲ್ಲಿ ಸ್ವಯಂ ಸೇವಕರನ್ನು ಭರ್ತಿ ಮಾಡಿಕೊಳ್ಳುವ ಪ್ರಯತ್ನ ನಡೆಸಿದೆ.
7. ಪೌರರಕ್ಷಣಾ ಸ್ವಯಂ ಸೇವಕರಿಗೆ ಬೆಂಗಳೂರಿನ ಗೃಹರಕ್ಷಕ ಮತ್ತು ಪೌರರಕ್ಷಣಾ ಮಹಾ ವಿದ್ಯಾಲಯದಲ್ಲಿ ಗೃಹರಕ್ಷಕರೊಂದಿಗೆ ತರಬೇತಿಯನ್ನು ನೀಡಲಾಗುತ್ತಿದೆ.
8. ಪೌರರಕ್ಷಣಾ ಪಟ್ಟಣಗಳಲ್ಲಿ ಆಕಸ್ಮಿಕ ಸನ್ನಿವೇಶಗಳ ಬಗ್ಗೆ ಮುನ್ನೆಚ್ಚರಿಕೆ ನೀಡಲು ನಿರ್ದಿಷ್ಟ ಪ್ರದೇಶಗಳಲ್ಲಿ ಪೌರರಕ್ಷಣಾ ಸೈರನ್‌ಗಳನ್ನು ಅಳವಡಿಸಲಾಗಿದೆ.

**ಎಂ.ಡಿ.ಸಿಂಹ, ಐಪಿಎಸ್**
ಆರಕ್ಷಕ ಮಹಾ ನಿರ್ದೇಶಕರು, ಗೃಹರಕ್ಷಕ ದಳದ ಮಹಾ
ಸಮಾದೇಷ್ಟರು ಮತ್ತು ನಿರ್ದೇಶಕರು, ಪೌರರಕ್ಷಣೆ.

**ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000ರ ನಿಯಮ 3(ಬಿ)(iv)ರ ರೀತ್ಯಾ ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರಿಕರಿಗೆ ಅನುಕೂಲತೆಗಳ ವಿವರಗಳ ಪ್ರಕಟಣೆ**

**1. ಸಾಮಾನ್ಯ ವಿವರ:**

(1) ಈ ಇಲಾಖೆಯು ಮೂರು ಹಂತಗಳ ಸಾರ್ವಜನಿಕ ಪ್ರಾಧಿಕಾರಗಳನ್ನು ಹೊಂದಿದ್ದು ವಿವರ ಈ ಕೆಳಕಂಡಂತಿದೆ.

(ಅ) ಜಿಲ್ಲಾ ಮಟ್ಟದಲ್ಲಿನ ಗೃಹರಕ್ಷಕ ದಳದ ಎಲ್ಲಾ ಜಿಲ್ಲಾ ಸಮಾದೇಷ್ಟರುಗಳು.

(ಆ) ರಾಜ್ಯ ಮಟ್ಟದಲ್ಲಿನ ಸಮಾದೇಷ್ಟರು, ಗೃಹರಕ್ಷಕ ದಳ ಮತ್ತು ಪೌರರಕ್ಷಣಾ ತರಬೇತಿ ಮಹಾ ವಿದ್ಯಾಲಯ, ಬೆಂಗಳೂರು.

(ಇ) ಗೃಹರಕ್ಷಕ ದಳ ಹಾಗೂ ಪೌರರಕ್ಷಣಾ ಕೇಂದ್ರ ಕಚೇರಿಗೆ ಸಂಬಂಧಿಸಿದಂತೆ ಉಪ ಮಹಾ ಸಮಾದೇಷ್ಟರು, ಗೃಹರಕ್ಷಕ ದಳ ಹಾಗೂ ಉಪ ನಿರ್ದೇಶಕರು ಪೌರರಕ್ಷಣೆ, ಕರ್ನಾಟಕ ರಾಜ್ಯ, ಬೆಂಗಳೂರು ಇವರು ಸಾರ್ವಜನಿಕ ಪ್ರಾಧಿಕಾರದ ಅಧಿಕಾರಿಗಳಾಗಿರುತ್ತಾರೆ.

(2) ಕೇಂದ್ರ ಕಚೇರಿ ಹಾಗೂ ಜಿಲ್ಲಾ ಕಚೇರಿ ಕರ್ತವ್ಯದ ಅವಧಿ ಈ ರೀತಿ ಇರುತ್ತದೆ.

ಬೆಳಿಗ್ಗೆ 10.00 ರಿಂದ 1.30 ಮಧ್ಯಾಹ್ನ 2.15 ರಿಂದ 5.30
ಊಟದ ವಿರಾಮ ಮಧ್ಯಾಹ್ನ 1.30 ರಿಂದ 2.15
ತರಬೇತಿ ಮಹಾ ವಿದ್ಯಾಲಯ ಬೆಳಿಗ್ಗೆ 9.30 ರಿಂದ 5.00 ಗಂಟೆ

**ಸಾರ್ವಜನಿಕ ಕುಂದುಕೊರತೆಗಳ ಬಗ್ಗೆ ನೀಡಲಾಗುತ್ತಿರುವ ಪ್ರಾಮುಖ್ಯತೆ:**

1) ಸಾರ್ವಜನಿಕ ಕುಂದುಕೊರತೆಗಳ ಸಂಬಂಧವಾಗಿ ಬರುವ ಅರ್ಜಿಗಳ ಪರಿಶೀಲನೆಗಾಗಿ ಮಾನ್ಯ ಉಪ ಮಹಾ ಸಮಾದೇಷ್ಟರು, ಗೃಹರಕ್ಷಕ ದಳ ಹಾಗೂ ಉಪ ನಿರ್ದೇಶಕರು, ಪೌರರಕ್ಷಣೆ ಇವರನ್ನು ಸಮನ್ವಯ ಅಧಿಕಾರಿಗಳನ್ನಾಗಿ ನೇಮಿಸಲಾಗಿದ್ದು ಈ ಬಗ್ಗೆ ಪತ್ರಿಕೆಗಳಲ್ಲಿ ಸಾರ್ವಜನಿಕ ಪ್ರಕಟಣೆ ನೀಡಲಾಗಿದೆ.

2) ಸ್ವೀಕರಿಸಲಾದ ಅರ್ಜಿಗಳನ್ನು ಪರಿಶೀಲಿಸಿ, ನಿಯಮಾನುಸಾರ ತುರ್ತಾಗಿ ಕ್ರಮ ಕೈಗೊಂಡು ಅರ್ಜಿದಾರರಿಗೆ ಹಿಂಬರಹವನ್ನು ನೀಡಲಾಗುತ್ತಿದೆ.

3) ಸಾರ್ವಜನಿಕ ದೂರು ವಿಭಾಗದಿಂದ ಬರುವ ದೂರು ಅರ್ಜಿಗಳ ವಿಲೇವಾರಿ ಬಗ್ಗೆ ಮಾಸಿಕ ವರದಿಯನ್ನು ಆಡಳಿತ ಸುಧಾರಣೆ ಇಲಾಖೆ, ಸಾರ್ವಜನಿಕ ದೂರು ನಿವಾರಣಾ ವಿಭಾಗಕ್ಕೆ ಪ್ರತಿ ತಿಂಗಳು ಕಳುಹಿಸಿಕೊಡಲಾಗುತ್ತಿದೆ.

**ಇಲಾಖಾ ರಚನೆ ಪಟ್ಟಿ**

**ರಾಜ್ಯ ಮಟ್ಟದಲ್ಲಿ**

ಆರಕ್ಷಕ ಮಹಾ ನಿರ್ದೇಶಕರು, ಗೃಹರಕ್ಷಕ ದಳದ
ಮಹಾ ಸಮಾದೇಷ್ಟರು ಹಾಗೂ ನಿರ್ದೇಶಕರು
ಪೌರರಕ್ಷಣೆ



ಪೊಲೀಸ್ ಮಹಾ ನಿರೀಕ್ಷಕರು
ಹಾಗೂ ಅಪರ ಮಹಾ ಸಮಾದೇಷ್ಟರು ಗೃಹರಕ್ಷಕ ದಳ
ಹಾಗೂ ಅಪರ ಮಹಾ ನಿರ್ದೇಶಕರು, ಪೌರರಕ್ಷಣೆ.



ಗೃಹರಕ್ಷಕ ದಳದ ಉಪ ಮಹಾ
ಸಮಾದೇಷ್ಟರು ಹಾಗೂ
ಉಪ ನಿರ್ದೇಶಕರು, ಪೌರರಕ್ಷಣೆ



- ಲೆಕ್ಕಾಧಿಕಾರಿಗಳು
  
  - ಲೆಕ್ಕಪತ್ರ ವಿಭಾಗ
- ಸಹಾಯಕ ಆಡಳಿತಾಧಿಕಾರಿಗಳು
  - ಪೌರರಕ್ಷಣೆ ವಿಭಾಗ
  - ವಿಭಾಗಗಳು, ಆಡಳಿತ, ಸಿಬ್ಬಂದಿ ತರಬೇತಿ, ಉಗ್ರಾಣ, ಬೆರಳಚ್ಚು, ರವಾನೆ, ಗ್ರೂಪ್ 'ಡಿ' ಸಿಬ್ಬಂದಿ
- ಜಿಲ್ಲಾ ಸಮಾದೇಷ್ಟರು

ಸಮಾದೇಷ್ಟರು
ಗೃಹರಕ್ಷಕ ದಳ ಹಾಗೂ ಪೌರರಕ್ಷಣಾ
ತರಬೇತಿ ಮಹಾ ವಿದ್ಯಾಲಯ.





- ತರಬೇತಿ ಮಹಾ ವಿದ್ಯಾಲಯ ಉಪ ಸಮಾದೇಷ್ಟರು, ಬೋಧಕರು, ಸೈನಿಕ
- ವಾಹನ
- ಆರ್ಮೋರರ್

**ಎಂ.ಡಿ.ಸಿಂಹ, ಐಪಿಎಸ್**
ಆರಕ್ಷಕ ಮಹಾ ನಿರ್ದೇಶಕರು
ಗೃಹರಕ್ಷಕ ದಳದ ಮಹಾ ಸಮಾದೇಷ್ಟರು
ಮತ್ತು ನಿರ್ದೇಶಕರು, ಪೌರರಕ್ಷಣೆ.

## ಜಿಲ್ಲಾ ಮಟ್ಟದಲ್ಲಿ

## ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000ರ ನಿಯಮ 3(ಬಿ)(ii)ರ ರೀತ್ಯಾ ಗೃಹರಕ್ಷಕ ದಳದ ಜಿಲ್ಲಾ ಕಚೇರಿಯ ಅಧಿಕಾರಿಗಳು ಮತ್ತು ನೌಕರರ ಕರ್ತವ್ಯಗಳ ಸಂಕ್ಷಿಪ್ತ ವಿವರಣೆಗಳ ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅವರು ಅನುಸರಿಸುವ ಕಾರ್ಯ ವಿಧಾನ ಪ್ರಕಟಣೆ

**ಜಿಲ್ಲಾ ಸಮಾದೇಷ್ಟರು:**

ಪ್ರತಿಯೊಂದು ಜಿಲ್ಲೆಗಳಲ್ಲಿ ಗೃಹರಕ್ಷಕ ದಳದ ಗೌರವ ಸಮಾದೇಷ್ಟರು ಕಚೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಪೂರ್ಣಕಾಲಿಕ ವೇತನ ಪಡೆಯುವ ಉಪ ಸಮಾದೇಷ್ಟರು, ಸಹಾಯಕ ಆಡಳಿತಾಧಿಕಾರಿಗಳು, ಅಧೀಕ್ಷಕರು, ಪ್ರಥಮ ದರ್ಜೆ ಸಹಾಯಕರು ಮತ್ತು ಬೋಧಕ ವರ್ಗದವರು ಸಹಾಯಕರಾಗಿ ಕರ್ತವ್ಯ ನಿರ್ವಹಿಸುತ್ತಾರೆ. ಇವರಲ್ಲದೆ ಗೌರವ ಗೃಹರಕ್ಷಕ ಅಧಿಕಾರಿಗಳಾದ ಸೆಕೆಂಡ್ ಇನ್ ಕಮಾಂಡ್, ಅಡ್ಜುಟೆಂಟ್, ಸ್ಟಾಫ್ ಆಫೀಸರ್, ಕಂಪನಿ ಕಮಾಂಡರ್, ಸೀನಿಯರ್ ಪ್ಲಟೂನ್ ಕಮಾಂಡರ್ ಹಾಗೂ ಪ್ಲಟೂನ್ ಕಮಾಂಡರ್ ಹುದ್ದೆಯಲ್ಲಿರುವವರು ಸಮಾದೇಷ್ಟರ ಕಾರ್ಯಗಳಲ್ಲಿ ನೆರವಾಗುತ್ತಾರೆ.

**ನೇಮಕಾತಿ:**

ಕರ್ನಾಟಕ ಗೃಹರಕ್ಷಕ ಕಾಯ್ದೆ 1962 (ತಿದ್ದುಪಡಿ) 2ಎ ಗೆ ಅನುಗುಣವಾಗಿ ಸಮಾದೇಷ್ಟರ ನೇಮಕಾತಿಗೆ ಸಂಬಂಧಿಸಿದಂತೆ ಕೆಲವು ತಿದ್ದುಪಡಿಗಳನ್ನು 2003ರಲ್ಲಿ ಮಾಡಲಾಗಿದ್ದು, ಇದರನ್ವಯ ಸಮಾದೇಷ್ಟರ ನೇಮಕಾತಿಗಾಗಿ ಆಯ್ಕೆ ಸಮಿತಿಯನ್ನು ಸರ್ಕಾರವು ರಚಿಸಲ್ಪಟ್ಟಿರುತ್ತದೆ. ರಚಿಸಲ್ಪಟ್ಟ ಸಮಿತಿಯಲ್ಲಿ ಈ ಕೆಳಕಂಡ ಅಧಿಕಾರಿಗಳು ಇರುತ್ತಾರೆ.

(1) ಕಾರ್ಯದರ್ಶಿಗಳು, ಗೃಹ ಮತ್ತು ಸಾರಿಗೆ ಇಲಾಖೆ.

(2) ಆರಕ್ಷಕ ಮಹಾ ನಿರ್ದೇಶಕರು, ಗೃಹರಕ್ಷಕ ದಳದ ಮಹಾ ಸಮಾದೇಷ್ಟರು ಮತ್ತು ನಿರ್ದೇಶಕರು, ಪೌರರಕ್ಷಣೆ.

(3) ಉಪ ಮಹಾ ಸಮಾದೇಷ್ಟರು, ಗೃಹರಕ್ಷಕ ದಳ ಹಾಗೂ ಉಪ ನಿರ್ದೇಶಕರು, ಪೌರರಕ್ಷಣೆ.

**ಸಮಾದೇಷ್ಟರ ಹುದ್ದೆಗೆ ನೇಮಕಾತಿ ಮಾಡಲ್ಪಡುವ ವ್ಯಕ್ತಿಗೆ ಇರಬೇಕಾದ ಅರ್ಹತೆ ಹಾಗೂ ನಿಬಂಧನೆಗಳು:**

ಕರ್ನಾಟಕ ಗೃಹರಕ್ಷಕ ದಳ (ತಿದ್ದುಪಡಿ) ನಿಯಮ 2003 (3ಎ)ನಲ್ಲಿ ಸಮಾದೇಷ್ಟರುಗಳ ಹುದ್ದೆಗೆ ನೇಮಕಾತಿ ಮಾಡಲ್ಪಡುವ ವ್ಯಕ್ತಿಗೆ ಇರಬೇಕಾದ ವಿದ್ಯಾರ್ಹತೆ ಹಾಗೂ ನಿಬಂಧನೆಗಳ ಬಗ್ಗೆ ತಿಳಿಸಲಾಗಿದೆ.

(1) ಜಿಲ್ಲೆಯಲ್ಲಿ ಜವಾಬ್ದಾರಿ ಸ್ಥಾನವನ್ನು ಹೊಂದಿದವನಾಗಿರಬೇಕು.

(2) ಅಂಗೀಕೃತಗೊಂಡ ಯಾವುದೇ ವಿಶ್ವವಿದ್ಯಾನಿಲಯದ ಪದವೀಧರನಾಗಿರಬೇಕು.

(3) ಯಾವುದೇ ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿರಬಾರದು.

(4) ಯಾವುದೇ ವಿಧವಾದ ಕ್ರಿಮಿನಲ್ ಮೊಕದ್ದಮೆಗಳಲ್ಲಿ ತೊಡಗಿರಬಾರದು.

(5) ಗರಿಷ್ಠ ವಯೋಮಿತಿ 50 ವರ್ಷಕ್ಕಿಂತ ಮೀರಿರಬಾರದು.

(6) ಜಿಲ್ಲಾ ಕೇಂದ್ರಸ್ಥಾನದಲ್ಲಿ ವಾಸಿಸುತ್ತಿರಬೇಕು.

(7) ದೈಹಿಕ ಆರೋಗ್ಯ ಉತ್ತಮವಾಗಿರಬೇಕು.

**ಸಮಾದೇಷ್ಟರ ಕರ್ತವ್ಯ ಹಾಗೂ ಅಧಿಕಾರ ವ್ಯಾಪ್ತಿ:**

1) ಸಮಾದೇಷ್ಟರು, ಜಿಲ್ಲಾ ಗೃಹರಕ್ಷಕ ದಳದ ನಿಯಂತ್ರಣಾಧಿಕಾರಿಗಳಾಗಿದ್ದು, ಸಿಬ್ಬಂದಿಗಳ ವೇತನ ಹಾಗೂ ಗೃಹರಕ್ಷಕರ ಭತ್ಯೆಗಳನ್ನು ಡ್ರಾ ಮಾಡುವ ಅಧಿಕಾರಿಗಳಾಗಿ, ಕರ್ತವ್ಯ ನಿರ್ವಹಿಸುತ್ತಾರೆ.

2) ಗೃಹರಕ್ಷಕ ಕಾಯ್ದೆಯಡಿಯಲ್ಲಿ ವಹಿಸಿಕೊಡಲಾಗುವ ಯಾವುದೇ ಕರ್ತವ್ಯಗಳನ್ನು ನಿರ್ವಹಿಸಲು ಹಾಗೂ ಕರ್ತವ್ಯಗಳಿಗೆ ಹಾಜರಾಗಲು ಸಮಾದೇಷ್ಟರು ಯಾವುದೇ ಸಂದರ್ಭದಲ್ಲಿ ಗೃಹರಕ್ಷಕರನ್ನು ಕರೆಯುವ ಅಧಿಕಾರವನ್ನು ಹೊಂದಿರುತ್ತಾರೆ.

3) ಗೃಹರಕ್ಷಕ ದಳದ ಮಹಾ ಸಮಾದೇಷ್ಟರ ನಿರ್ದೇಶನಕ್ಕೆ ಅನುಗುಣವಾಗಿ ಕರ್ತವ್ಯ ನಿರ್ವಹಿಸಬೇಕಲ್ಲದೆ ಕೇಂದ್ರ ಕಚೇರಿಯಿಂದ ಕಾಲ ಕಾಲಕ್ಕೆ ಕೇಳಲಾಗುವ ಮಾಹಿತಿಗಳನ್ನು ಸಮಾದೇಷ್ಟರು ಒದಗಿಸಬೇಕಾಗುತ್ತದೆ.

4) ಗೃಹರಕ್ಷಕ ಹಾಗೂ ಪೌರರಕ್ಷಣಾ ತರಬೇತಿ ಮಹಾ ವಿದ್ಯಾಲಯದಲ್ಲಿ ನಡೆಯುವ ತರಬೇತಿಗೆ ಜಿಲ್ಲಾ ಮಟ್ಟದ ಗೃಹರಕ್ಷಕರನ್ನು ಆಯ್ಕೆ ಮಾಡಿ ನಿಯೋಜಿಸುತ್ತಾರೆ.

5) ಗೃಹರಕ್ಷಕ ಸದಸ್ಯತ್ವದಲ್ಲಿ ನೊಂದಣಿ ಹೊಂದಿ ಸೇವೆ ಸಲ್ಲಿಸಲು ಇಚ್ಚಿಸುವ ನಾಗರಿಕರನ್ನು ಜಿಲ್ಲಾ ಆಯ್ಕೆ ಸಮಿತಿಯ ಮುಖಾಂತರ ಭರ್ತಿ ಮಾಡಿಕೊಳ್ಳುವ ಅಧಿಕಾರ ಹೊಂದಿರುತ್ತಾರೆ.

**ಲಿಪಿಕ ಸಿಬ್ಬಂದಿ ವರ್ಗ:**

ಜಿಲ್ಲಾ ಸಮಾದೇಷ್ಟರಿಗೆ ಸಹಾಯಕರಾಗಿ ಕರ್ತವ್ಯ ನಿರ್ವಹಿಸಲು ವೇತನ ಪಡೆಯುವ ಉಪ ಸಮಾದೇಷ್ಟರು, ಸಹಾಯಕ ಆಡಳಿತಾಧಿಕಾರಿಗಳು, ಅಧೀಕ್ಷಕರು, ಪ್ರಥಮ ದರ್ಜೆ ಸಹಾಯಕರು ಹಾಗೂ ದ್ವಿತೀಯ ದರ್ಜೆ ಸಹಾಯಕರು ಹಾಗೂ ಗ್ರೂಪ್ 'ಡಿ' ನೌಕರರು ಇರುತ್ತಾರೆ.

**ಬೋಧಕ ವರ್ಗ**

ಜಿಲ್ಲೆಯಲ್ಲಿನ ಗೃಹರಕ್ಷಕರಿಗೆ ತರಬೇತಿ ನೀಡಲು ಹಾಗೂ ಕರ್ತವ್ಯ ನಿಯೋಜನೆಯಲ್ಲಿ ಗೃಹರಕ್ಷಕರನ್ನು ತೊಡಗಿಸುವ ಕಾರ್ಯಕ್ಕೆ ನೆರವಾಗಲು ಬೋಧಕರು ಹಾಗೂ ಸಹಾಯಕ ಬೋಧಕರು ಇರುತ್ತಾರೆ.

**ಗೌರವ ಗೃಹರಕ್ಷಕ ಅಧಿಕಾರಿಗಳು**

ಸಂಸ್ಥೆಯ ಕಾರ್ಯ ಚಟುವಟಿಕೆಗಳನ್ನು ಉತ್ತಮವಾಗಿ ನಡೆಸಿಕೊಂಡು ಹೋಗಲು ಜಿಲ್ಲಾ ಮಟ್ಟದಲ್ಲಿ ಗೌರವ ಗೃಹರಕ್ಷಕ ಅಧಿಕಾರಿಗಳು ನೇಮಕಗೊಂಡಿರುತ್ತಾರೆ.

(ಅ) **ಸೆಕೆಂಡ್–ಇನ್–ಕಮಾಂಡ್:** ಸಮಾದೇಷ್ಟರ ನಂತರ ಸೆಕೆಂಡ್–ಇನ್–ಕಮಾಂಡ್ ಗೌರವ ಹುದ್ದೆಯ ಅಧಿಕಾರಿಗಳು ಸಂಸ್ಥೆಯ ಕಾರ್ಯ ಚಟುವಟಿಕೆಗಳಲ್ಲಿ ಪ್ರಮುಖ ಸ್ಥಾನ ವಹಿಸಿರುತ್ತಾರೆ.

(ಆ) **ಅಡ್ಜುಟೆಂಟ್:** ಗೃಹರಕ್ಷಕರ ಕರ್ತವ್ಯ ನಿಯೋಜನೆ ತರಬೇತಿ ಹಾಗೂ ಆಡಳಿತಾತ್ಮಕ ವಿಷಯಗಳಿಗೆ ಸಂಬಂಧಿಸಿದಂತೆ ಸಮಾದೇಷ್ಟರಿಗೆ ಸಹಾಯಕರಾಗಿ ಕರ್ತವ್ಯ ನಿರ್ವಹಿಸುತ್ತಾರೆ.

(ಇ) **ಸ್ಟಾಫ್ ಆಫೀಸರ್:** ಸಂಸ್ಥೆಯಲ್ಲಿ ಜೇಷ್ಠತೆಯ ಆಧಾರದ ಮೇಲೆ ಸೇವೆ ಸಲ್ಲಿಸಿರುವ ಗೌರವ ಗೃಹರಕ್ಷಕ ಅಧಿಕಾರಿಗಳನ್ನು ಸಮಾದೇಷ್ಟರ ಶಿಫಾರಸ್ಸಿನ ಮೇರೆಗೆ ಮಹಾ ಸಮಾದೇಷ್ಟರು ಸ್ಟಾಫ್ ಆಫೀಸರ್ ಹುದ್ದೆಗಳಿಗೆ ನೇಮಕಾತಿ ಆದೇಶ ನೀಡುತ್ತಾರೆ. ತರಬೇತಿ, ಲೆಕ್ಕಪತ್ರ, ವೈದ್ಯಕೀಯ, ಮೋಟಾರ್ ಟ್ರಾನ್ಸ್‌ಪೋರ್ಟ್ ಮುಂತಾದ ವಿಭಾಗಗಳಿಗೆ ಸಂಬಂಧಿಸಿದಂತೆ ಸ್ಟಾಫ್ ಆಫೀಸರ್‌ಗಳು ನೇಮಕಗೊಂಡಿರುತ್ತಾರೆ. ಸಂಸ್ಥೆಯನ್ನು ಅಭಿವೃದ್ಧಿ ಪಡಿಸಲು ಸೆಕೆಂಡ್ ಇನ್ ಕಮಾಂಡ್ ಹಾಗೂ ಅಡ್ಜುಟೆಂಟ್‌ಗಳಿಗೆ ನೆರವಾಗುತ್ತಾರೆ.

**ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000ದ ನಿಯಮ 3(ಬಿ)(iii)ರ ರೀತ್ಯಾ ಇಲಾಖೆಯ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ಪ್ರಾಧಿಕಾರವು ರೂಪಿಸಿರುವ ಗುಣಮಟ್ಟಗಳ ಪ್ರಕಟಣೆ**

1. **ಸಂಖ್ಯಾಬಲ:**

ಜಿಲ್ಲೆಗಳಿಗೆ ನಿಗದಿಗೊಳಿಸಲಾಗಿರುವ ಗೃಹರಕ್ಷಕ ಸಂಖ್ಯಾಬಲವನ್ನು ಪೂರ್ಣ ಪ್ರಮಾಣದಲ್ಲಿ ಭರ್ತಿ ಮಾಡಲು ಸಮಾದೇಷ್ಟರು ಅಗತ್ಯ ಕ್ರಮ ಕೈಗೊಳ್ಳುತ್ತಾರೆ.

2. **ಕರ್ತವ್ಯ ನಿಯೋಜನೆ:**

ಕರ್ತವ್ಯ ನಿಯೋಜನೆಗಾಗಿ ಪೊಲೀಸ್ ಸಿಬ್ಬಂದಿಯ ಜೊತೆಯಲ್ಲಿ ಕರ್ತವ್ಯ ನಿರ್ವಹಿಸಲು ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳಿಂದ ಕೋರಿಕೆ ಸ್ವೀಕರಿಸಿದ ಕೂಡಲೇ ಮಹಾ ಸಮಾದೇಷ್ಟರಿಂದ ಮಂಜೂರಾತಿ ಪಡೆದು ಕರ್ತವ್ಯಕ್ಕೆ ಗೃಹರಕ್ಷಕರನ್ನು ನಿಯೋಜಿಸಲಾಗುತ್ತದೆ.

3. **ತರಬೇತಿ ಶಿಬಿರ:**

ಹೊಸದಾಗಿ ನೊಂದಣಿ ಹೊಂದಿದ ಗೃಹರಕ್ಷಕರಿಗೆ ಪ್ರಾರಂಭಿಕವಾಗಿ 14 ದಿವಸಗಳ ಮೂಲ ತರಬೇತಿ ಶಿಬಿರವನ್ನು ಜಿಲ್ಲಾ ಮಟ್ಟದಲ್ಲಿ ವ್ಯವಸ್ಥೆಗೊಳಿಸಲಾಗುತ್ತಿದೆ. ಇದಲ್ಲದೆ ಒಂದು ವರ್ಷ ಮುಗಿದ ಗೃಹರಕ್ಷಕರಿಗೆ ಬಂದೂಕು ಉಡಾವಣಾ ತರಬೇತಿ ಹಾಗೂ ವಾರ್ಷಿಕ ತರಬೇತಿ ಶಿಬಿರಗಳನ್ನು ವ್ಯವಸ್ಥೆಗೊಳಿಸಲಾಗುತ್ತಿದೆ.

4. **ತರಬೇತಿ ನಿಯೋಜನೆ:**

ಗೃಹರಕ್ಷಕ ಹಾಗೂ ಪೌರರಕ್ಷಣಾ ತರಬೇತಿ ಮಹಾ ವಿದ್ಯಾಲಯದಲ್ಲಿ ನಡೆಯುವ ಪ್ರಗತಿಪರ ಹಾಗೂ ಮೂಲ ತರಬೇತಿಗಾಗಿ ಗೃಹರಕ್ಷಕರನ್ನು ನಿಯೋಜಿಸಲಾಗುತ್ತಿದೆ.

**ಪದಕ ನೀಡಿಕೆಗಾಗಿ ಪ್ರಸ್ತಾವನೆ:**

ಜಿಲ್ಲೆಯಲ್ಲಿ ಉತ್ತಮ ಸೇವೆ ಸಲ್ಲಿಸುತ್ತಿರುವ ಗೌರವ ಗೃಹರಕ್ಷಕ ಅಧಿಕಾರಿಗಳನ್ನು ಗುರ್ತಿಸಿ ಇವರುಗಳ ಹೆಸರುಗಳನ್ನು ವಿಶಿಷ್ಟ ಸೇವಾ:ಶ್ಲಾಘನೀಯ ಸೇವಾ ಪದಕಗಳ ನೀಡಿಕೆಗಾಗಿ ಶಿಫಾರಸ್‌ಗಳನ್ನು ಮಹಾ ಸಮಾದೇಷ್ಟರುಗಳಿಗೆ ಕಳುಹಿಸಿಕೊಡುತ್ತಾರೆ.

**ಹಕ್ಕು ಅಧಿನಿಯಮ 2000ದ ನಿಯಮ 3(ಬಿ) (iv)ರ ರೀತ್ಯಾ ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರಿಕರಿಗೆ ಅನುಕೂಲತೆಗಳ ವಿವರಗಳ ಪ್ರಕಟಣೆ:**

**ಸಾಮಾನ್ಯ ವಿವರ:**

ಜಿಲ್ಲಾ ಮಟ್ಟದಲ್ಲಿನ ಎಲ್ಲಾ ಸಮಾದೇಷ್ಟರುಗಳು ಸಾರ್ವಜನಿಕ ಪ್ರಾಧಿಕಾರದ ಅಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುತ್ತಾರೆ.

**ಕೆಲಸದ ವೇಳೆ:** ಬೆಳಿಗ್ಗೆ 10.00 ರಿಂದ 1.30 ಮಧ್ಯಾಹ್ನ 2.15 ರಿಂದ 5.30<br>
ಊಟದ ವಿರಾಮ 1.30 ರಿಂದ 2.15

**ಸಾರ್ವಜನಿಕ ಕುಂದುಕೊರತೆಗಳ ಬಗ್ಗೆ ನೀಡಲಾಗುತ್ತಿರುವ ಪ್ರಾಮುಖ್ಯತೆ:**

ಜಿಲ್ಲಾ ಗೃಹರಕ್ಷಕ ಕಚೇರಿಗಳು ಸಾಮಾನ್ಯವಾಗಿ ಸಾರ್ವಜನಿಕ ಸಂಪರ್ಕ ವ್ಯಾಪ್ತಿಗೆ ಒಳಪಟ್ಟು ಕರ್ತವ್ಯ ನಿರ್ವಹಿಸುತ್ತಿಲ್ಲವಾದ್ದರಿಂದ ಸಾರ್ವಜನಿಕರಿಂದ ಕುಂದು ಕೊರತೆ ಅರ್ಜಿಗಳು ಸ್ವೀಕೃತಿಗೊಳ್ಳುವುದಿಲ್ಲ. ಆದಾಗ್ಯೂ ಸರ್ಕಾರವು ಇಲಾಖಾ ಮುಖ್ಯಸ್ಥರ ಮುಖಾಂತರ ಕಳುಹಿಸಲ್ಪಡುವ ಅರ್ಜಿಗಳಿಗೆ ಸಂಬಂಧಿಸಿದಂತೆ ಜಿಲ್ಲಾ ಸಮಾದೇಷ್ಟರುಗಳಿಂದ ಸೂಕ್ತ ಉತ್ತರವನ್ನು ಪಡೆದು ಇಲಾಖಾ ಮುಖ್ಯಸ್ಥರು ಅರ್ಜಿದಾರರಿಗೆ ಸೂಕ್ತ ಹಿಂಬರಹ ಕಳುಹಿಸಿಕೊಡುತ್ತಾರೆ.

**ಎಂ.ಡಿ.ಸಿಂಹ, ಐಪಿಎಸ್**<br>
ಆರಕ್ಷಕ ಮಹಾ ನಿರ್ದೇಶಕರು ಗೃಹರಕ್ಷಕ ದಳದ ಮಹಾ ಸಮಾದೇಷ್ಟರು ಮತ್ತು ನಿರ್ದೇಶಕರು, ಪೌರರಕ್ಷಣೆ.




**ಎಂ.ಡಿ.ಸಿಂಹ, ಐಪಿಎಸ್**
ಆರಕ್ಷಕ ಮಹಾ ನಿರ್ದೇಶಕರು
ಗೃಹರಕ್ಷಕ ದಳದ ಮಹಾ ಸಮಾದೇಷ್ಟರು
ಮತ್ತು ನಿರ್ದೇಶಕರು, ಪೌರರಕ್ಷಣೆ.

ಪಿ.ಆರ್. 517

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ: 15/ಸಂವಿ/ಸಿ.ಓ.ಪಿ/2004, ದಿನಾಂಕ: 2ನೇ ಏಪ್ರಿಲ್, 2004**

ಬೆಂಗಳೂರು ನಗರದ ಕೇಂದ್ರ ಸಂಚಾರ ಉಪ ವಿಭಾಗದ ವ್ಯಾಪ್ತಿಗೆ ಬರುವ ಸಂಪಂಗಿರಾಮನಗರ 12ನೇ "ಎ" ಅಡ್ಡ ರಸ್ತೆಯಲ್ಲಿ ಇತ್ತೀಚೆಗೆ ವಾಹನ ಸಂಚಾರ ಅಧಿಕಗೊಂಡು ಸುಗಮ ಸಂಚಾರಕ್ಕೆ ಅಡ್ಡಿ ಉಂಟಾಗುತ್ತಿರುವುದು ಮತ್ತು ವಾಹನ ಸಂಚಾರದಲ್ಲಿ ನಿಧಾನಗತಿ ಉಂಟಾಗಿರುವುದು ಕಂಡು ಬಂದಿರುತ್ತದೆ. ಈ ಅಡ್ಡ ರಸ್ತೆಯಲ್ಲಿ ಆಸ್ಪತ್ರೆ ಹಾಗೂ ವಾಸದ ಮನೆಗಳಿದ್ದು, ವಾಹನ ಸಂಚಾರವನ್ನು ಸುಗಮಗೊಳಿಸಲು ಸಾರ್ವಜನಿಕ ಹಿತಾಸಕ್ತಿ ಗಮನಿಸಿ ಸಂಪಂಗಿರಾಮನಗರ 12ನೇ "ಎ" ಅಡ್ಡ ರಸ್ತೆಯಲ್ಲೂ ಏಕ ಮುಖ ಸಂಚಾರ ಜಾರಿಗೊಳಿಸುವುದು ಅವಶ್ಯಕವೆಂದು ಕಂಡು ಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

"ಸಂಪಂಗಿರಾಮನಗರ 12ನೇ "ಎ" ಅಡ್ಡ ರಸ್ತೆಯಲ್ಲಿ ಸಂಪಂಗಿರಾಮನಗರ 1ನೇ ಮುಖ್ಯ ರಸ್ತೆಯಿಂದ 4ನೇ ಮುಖ್ಯ ರಸ್ತೆ ಜಂಕ್ಷನ್ ವರೆಗೆ ಪಶ್ಚಿಮದಿಂದ ಪೂರ್ವಕ್ಕೆ ಹಾಲಿ ಇರುವ ಸಂಚಾರ ವ್ಯವಸ್ಥೆಯನ್ನು ಯಥಾಸ್ಥಿತಿ ಉಳಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ 4ನೇ ಮುಖ್ಯ ರಸ್ತೆ ಜಂಕ್ಷನ್‌ನಿಂದ 1ನೇ ಮುಖ್ಯ ರಸ್ತೆ ಜಂಕ್ಷನ್ ವರೆಗೆ ಪೂರ್ವದಿಂದ ಪಶ್ಚಿಮಕ್ಕೆ ಸಂಚರಿಸುವ ಎಲ್ಲಾ ರೀತಿಯ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ."

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 7.4.2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 6.4.2004 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

ಪಿ.ಆರ್. 579

**IN THE COURT OF THE II^ND ADDITIONAL CHIEF METROPOLITAN MAGISTRATE, BANGALORE CITY**

**NOTIFICATION No. ....../2003, Dated 5th April 2004**

It is hereby notified for the information of the public that the unclaimed properties mentioned under are in the custody of the Banashankari Police station, Bangalore City, as unclaimed shall beconfiscated to the Government and disposed off according to law of not claimed by the owner with proff of ownership within six months from the date of the publication of notification.

| Sl.No. | 'C' Mise/Cr. No. | PF No. | Description of properties |
|---|---|---|---|
| 1 | 662/90 | 115/91 | Luna CKW-4716 |
| 2 | 611/91 | 24/93 | Hero Puch |
| 3 | 546/93 | 105/93 | TVS Chamo TCD-5218 |

| Sl.No. | 'C' Mise/Cr. No. | PF No. | Description of properties |
|---|---|---|---|
| 4 | 121/95 | 54/95 | RX 100 CKK-6228 |
| 5 | 162/95 | 29/96 | Kinetic Honda KA-02 L-9074 |
| 6 | 248/96 | 59/96 | TVS-50 |
| 7 | 248/96 | 63/96 | TVS-50 CAP-5222 |
| 8 | 248/96 | 63/96 | TVS-50 CKI-7980 |
| 9 | 310/98 | 38/98 | 1) One Ultra Cycle,<br>2) One Iron rod |
| 10 | 602/98 | 84/98 | Yelow colour Bajaj Super No. CAR-2060 |
| 11 | 847/98 | 154/98 | White colour Premium Car 118 NE<br>No. MH-02-3842 |
| 12 | 333/99 | 98/99 | Kawasaki Bajaj No. KA-04 E-549 |
| 13 | 882/99 | 221/99 | Green Colour TVS-50 XL No. KA-05 X-8716 Chasis No. 005EA805, M-89-3615 |
| 14 | 'C' Mise 82/99 | 17/99 | RX-100 KA-05 Q-4275 |
| 15 | 'C' Mise 82/99 | 17/99 | TVS CAL-7994 |
| 16 | 216/00 | 76/00 | RX-100 KL-02-031 |
| 17 | 293/00 | 80/00 | RX-100 TN-01 4904 |
| 18 | 293/00 | 81/00 | RX-100 KA-05 J-9275 |
| 19 | 216/00 | 123/00 | RX-100 KA-22 J-2632 |
| 20 | 1072/00 | 203/00 | Bajaj RTZ No. KA-03 Q-8461<br>Engine No. 30M-95J-254466<br>Chasis No. 30F-95K-20379<br>Black colour 1995 Model |
| 21 | 667/01 | 156/01 | Kawasaki Bajaj No. KA-03 V-4963<br>Chasis No. C30CH042553<br>Engine No. 0E30CH042020 |
| 22 | 668/01 | 157/01 | TVS-XL No. KA-05 EA-3486,<br>Chasis No. A-903F 294928 |
| 23 | 672/01 | 158/01 | One Bajaj Chethak Scooter No. KA-05 V-8315 |
| 24 | 'C' Mise 706/01 | 170/01 | TVS-XL CKN-9908 |
| 25 | 429/02 | 86/02 | Samurai KA-05 N-1370 |
| 26 | 437/02 | 93/02 | Hero Honda TN-45 A-4822 |
| 27 | 437/02 | 93/02 | TVS-50 KA-05 Q-1814 |
| 28 | 437/02 | 94/02 | H/H Splendor TN-9 G-5721 |
| 29 | 437/02 | 95/02 | TVS-50 CKH-703 |
| 30 | 467/02 | 102/02 | TVS-50 |
| 31 | 467/02 | 103/02 | Chetak MYQ-1131 |
| 32 | 464/02 | 105/02 | Chetak MEO-3085 |
| 33 | 464/02 | 105/02 | TVS-50 KA-05 K-2247 |
| 34 | 464/02 | 106/02 | TVS-50 CKR-3797 |
| 35 | 1062/02 | 142/02 | One Ind Suzuki Motor Cycle No. DIX-1694 |
| 36 | 32/03 | 11/03 | Ambassador CAR KA-30-1945 |
| 37 | 'C' Mise 446/03 | 144/03 | Bajaj Pulsor KA-03 EH-1341 |

Bangalore City
Dated 5th April 2004

**Dharwadkar**
IInd Addl. Chief Metropolitan Magistrate, Bangalore City.

PR-580

**ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯುಸಿಎ:ಸಿಆರ್-6/ಎಫ್‌ಸಿ/04, ದಿನಾಂಕ: 2ನೇ ಏಪ್ರಿಲ್ 2004**

**ಅರ್ಜಿದಾರರು:**

1. ಶ್ರೀಮತಿ ಧನಲಕ್ಷ್ಮಿ W/o ಎ.ಟಿ. ಕಾಲಿಯ ಮೂರ್ತಿ,
2. ಶ್ರೀಮತಿ ಪುಷ್ಪರಾಣಿ
3. ಶ್ರೀ ವೀರವೇಲು

ವಾಸ: ನಾರ್ಥ್ ಉದಯ ಫಲ್ಯಂ, ಸೆಲಂ ಮೈನ್ ರೋಡ್,
ಅಕ್ಕುರ ತಾಲ್ಲೂಕು, ಸೆಲಂ ಜಿಲ್ಲೆ, ತಮಿಳುನಾಡು

**ವಿರುದ್ಧ**

**ಪ್ರತಿವಾದಿಗಳು:**

1) ಶ್ರೀ ಎಂ. ಕೈಲಾಸಂ s/o ಮುತ್ತಪ್ಪ
ನಂ. 22/1, 1ನೇ ಕ್ರಾಸ್, ಚಾಮರಾಜಪೇಟೆ,
ಬೆಂಗಳೂರು-560018.

2. ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ.ಲಿ.,
ನ್ಯೂ ಇಡಪ್ಪಾಡಿ ರೋಡ್, ಶಂಕರಿ.

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ಧನಲಕ್ಷ್ಮಿ ಇವರು ತಮ್ಮ ಗಂಡನಾದ ಶ್ರೀ ಎ.ಟಿ. ಕಾಲಿಯ ಮೂರ್ತಿ ಇವರು ಪ್ರತಿವಾದಿಗಳಾದ ಶ್ರೀ ಎಂ. ಕೈಲಾಸಂ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ: 30.1.2004 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ, ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಎಸ್.ಸಿ. ರಾಮಚಂದ್ರ**
ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ,
ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್. 582

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಕಾಅಿಗ : ಕಾನಪ 11/04/52, ದಿನಾಂಕ: 2ನೇ ಏಪ್ರಿಲ್ 2004**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| 1. ಮೈಲಪ್ಪ S/o ಭರಮ್ಮಪ್ಪ ಪೂಜಾರ್<br>1. ಶ್ರೀಮತಿ ಹನುಮವ್ವ W/o ಮೈಲಪ್ಪ ಪೂಜಾರ್<br>3. ಹನಮಪ್ಪ S/o ಮೈಲಪ್ಪ ಪೂಜಾರ್<br>ಮೂವರು ವಾಸ: ಹಳ್ಳಿಗುಡಿ, ಮುಂಡರಗಿ ತಾಲ್ಲೂಕು,<br>ಗದಗ ಜಿಲ್ಲೆ. | | 1. ರವೀಂದ್ರ ವಾಸುದೇವ್ ವರ್ಣೇಕರ್,<br>ಲಾರಿ ಮಾಲೀಕರು, ಮನೆ ನಂ. ಪ್ಲಾಟ್ 163,<br>ವಿಜಯನಗರ, ಹಿಂಡಲಗ, ಬೆಳಗಾಂ.<br>2. ದಿ ಬ್ರಾಂಚ್ ಮೇನೇಜರ್ ನ್ಯೂ ಇಂಡಿಯಾ<br>ಅಶ್ಯೂರೆನ್ಸ್ ಕಂ. ಲಿ., ಬೆಳಗಾಂ. |

**ಪ್ರಕಟಣೆ**

ಅರ್ಜಿದಾರರಾದ ಶ್ರೀ : ಶ್ರೀಮತಿ ಮೈಲಪ್ಪ, ಹನುಮವ್ವ ಮತ್ತು ಹನಮಪ್ಪ ಇವರು, ತಾವು ಮೃತ ಮೈಲಾರಪ್ಪ ಇವರ ತಂದೆ, ತಾಯಿ ಮತ್ತು ತಮ್ಮ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮೈಲಾರಪ್ಪ ಇವರು ಒಂದನೇ ಪ್ರತಿವಾದಿಗಳಾದ ರವೀಂದ್ರ ಇವರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ, ಗದಗ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಕಾನೂನು ಅಡಿ ಆಯುಕ್ತರು.

ಪಿ.ಆರ್. 583

**KARNATAKA ADMINISTRATIVE TRIBUNAL, AT BANGALORE**
**BDA Complex, Indiranagar, Bangalore - 560 038**

**NOTIFICATION**

**No. BB/VB/9/2004, Dated 2nd April 2004**

In exercise of the powers conferred under Section-5 read with Section-22 of the Administrative Tribunals Act, 1985 and all other powers enabling thereto, the Constitution of Vacation Bench and designation of Vacation Judge for 'Summer Vacation' from 19th April 2004 to 30th April 2004 (b.d.i.) is made as follows:

1. Hon'ble Mr. Justice B.N. Mallikarjuna, Chairman, will be the Vacation Judge from 26th April to 30th April 2004 (b.d.i.).
2. Hon'ble Mr. Justice B.N. Mallikarjuna, Chairman, will sit in Court Hall-I on Wednesday, the 28th April 2004, to hear urgent matters and such other matters as the Bench may direct.
3. The Office of the Karnataka Administrative Tribunal will function upto 2.00 p.m. during the 'Summer Vacation'. However, on the day of sitting of Vacation Bench, the Office will function upto 5.00 p.m.
4. During the Vacation, the Registry will receive only urgent applications as per rules.

By Order of the Hon'ble Chairman
Registrar,
Karnataka Administrative Tribunal, Bangalore.

PR-584

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ ಉಪ ವಿಭಾಗ-1, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ ಡೈರಿ ಸರ್ಕಲ್ ಹತ್ತಿರ, ಬೆಂಗಳೂರು-29**

**ಸಂಖ್ಯೆ: ಡಬ್ಲ್ಯೂಸಿಐ/ಎನ್.ಎಫ್.ಸಿ./ಸಿಆರ್-85/2002, ದಿನಾಂಕ: 6ನೇ ಏಪ್ರಿಲ್ 2004**

**ಅರ್ಜಿದಾರರು:**
ಶ್ರೀ ಹೆಚ್.ವಿ. ರಂಗನಾಥ್
ಶ್ರೀ ವೆಂಕಟೇಗೌಡರವರ ಮಗ
ವಯಸ್ಸು 40 ವರ್ಷ, ನಂ. 1046, 2ನೇ ಕ್ರಾಸ್,
ಫೈವ್ ಲೈನ್, ಮುನೇಶ್ವರ ಬ್ಲಾಕ್, ಟಿ. ದಾಸರಹಳ್ಳಿ,
ಬೆಂಗಳೂರು-57

**ವಿರುದ್ಧ**

**ಪ್ರತಿವಾದಿಗಳು:**
1. ಶ್ರೀ ಖಲೀಲ್ ಅಹ್ಮದ್, ದಿ. ಸೈಯ್ಯದ್ ಇಮಾಮ್‌ರವರ ಮಗ, ಮುಸ್ಲಿಮ್ ರುದ್ರಭೂಮಿ, ಪಾದರಾಯನಪುರ, ಬೆಂಗಳೂರು-26.
2. ದಿ ಓರಿಯಂಟಲ್ ಇನ್ಶೂರೆನ್ಸ್ ಕಂ. ಲಿ., ದಿ.ಓ. ನಂ. 7, ನಂ. 20, ಜಾಲಹಳ್ಳಿ ಕ್ರಾಸ್, ಚೊಕ್ಕಸಂದ್ರ, ಬೆಂಗಳೂರು-57.

**ಪ್ರಕಟಣೆ**

ಈ ಮೇಲೆ ಹೇಳಲಾದ ಅರ್ಜಿದಾರರು ದಿ: 23.10.2000 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ತಾವು ಒಂದನೇ ಪ್ರತಿವಾದಿ ಸಂಸ್ಥೆಯಲ್ಲಿ ಚಾಲಕನಾಗಿ ಕೆಲಸ ನಿರ್ವಹಿಸುತ್ತಿದ್ದಾಗ, ದಿನಾಂಕ: 7.5.2000 ರಂದು ಅಪಘಾತ ಸಂಭವಿಸಿ, ಗಾಯಗಳನ್ನು ಹೊಂದಿರುತ್ತೇನೆ ಎಂದು ತಿಳಿಸಿ, ಕಾಯ್ದೆಯನ್ವಯ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದರೆ, ಸದರಿ ಅರ್ಜಿದಾರರು ದಿ: 6.10.2002 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿ, ಶ್ರೀಮತಿ ಮಂಜುಳ, 30 ವರ್ಷ, ದಿವಂಗತ ಹೆಚ್.ವಿ. ರಂಗನಾಥ್‌ರವರ ಹೆಂಡತಿ, ಕು. ನಳಿನ, 13 ವರ್ಷ, ಮೃತ ಹೆಚ್.ವಿ. ರಂಗನಾಥ್‌ರವರ ಮಗಳು, ಹಾಗೂ ಮಾ. ನವೀನ 12 ವರ್ಷ, ಮೃತ ಹೆಚ್.ವಿ. ರಂಗನಾಥ್‌ರವರ ಮಗ- ಇವರುಗಳು ಮೃತನ ವಾರಸುದಾರರು ಎಂದು ಹೇಳಿ ಮೃತ ದಿನಾಂಕ: 18.9.90 ರಂದು ಹೊಂದಿರುವ ಗಾಯಗಳಿಗೆ ಬರಬೇಕಾದ ಪರಿಹಾರದ ಹಣವನ್ನು ವಾರಸುದಾರರಾದ ತಮಗೆ ವಿತರಿಸುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಮೊಹಮ್ಮದ್ ಯುಸುಫ್**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ
ಉಪವಿಭಾಗ-1, ಬೆಂಗಳೂರು-29.

ಪಿ.ಆರ್. 585

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ-2 ಬೆಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು-2 ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್-6/ಎಫ್/2004, ದಿನಾಂಕ: 25ನೇ ಮಾರ್ಚ್ 2004**

**ಅರ್ಜಿದಾರರು:**
1) ಶ್ರೀಮತಿ ಮೀನಾಕ್ಷಿ, ಮೃತ ಕೃಷ್ಣಪ್ಪಗೌಡರವರ ಮಡದಿ
2) ಕೇಶವ ಗೌಡ
3) ಶೇಷಪ್ಪ ಗೌಡ
4) ಕುಮಾರಿ ಲಲಿತ, ಮೃತ ಕೃಷ್ಣಪ್ಪ ಗೌಡರವರ ಮಕ್ಕಳು, ಅಲಜೆ ಹೌಸ್, ಬಜತ್ತೂರು ವಿಲೇಜ್, ಉಪ್ಪಿನಂಗಡಿ ಪೋಸ್ಟ್, ಪಡಿಯಡ್ಕ ಹತ್ತಿರ, ಪುತ್ತೂರು ತಾಲ್ಲೂಕು, ದ.ಕ. ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:**
1) ಮೆ: ಶ್ರೀ ಶ್ರೀನಿವಾಸ ಇಂಡಸ್ಟ್ರೀಸ್ ನಂ. ಜೆ. 168/1, 2ನೇ ಮುಖ್ಯ ರಸ್ತೆ, ಶ್ರೀರಾಮ್‌ಪುರಂ ಹನುಮಂತಪುರಂ, ಬೆಂಗಳೂರು.
2) ದಿ ಓರಿಯಂಟಲ್ ಇನ್ಶೂರೆನ್ಸ್ ಕಂ. ಡಿವಿಜನಲ್ ಆಫೀಸ್ XII ಲಿಮಿಟೆಡ್ ಜಯಲಕ್ಷ್ಮಿ ಮ್ಯಾನ್ಷನ್, 2ನೇ ಮಹಡಿ, ನಂ. 1001/56, ಡಾ: ರಾಜ್‌ಕುಮಾರ್ ರಸ್ತೆ, 4ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-560010.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಮೀನಾಕ್ಷಿ ಮತ್ತು ಇತರರು ಇವರು ತಮ್ಮ ಗಂಡನಾದ ಶ್ರೀ ಕೃಷ್ಣಪ್ಪಗೌಡ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 13.9.2003 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ

ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಜಿ.ಆರ್. ಇಂಗಳೆ,**

ಪಿ.ಆರ್. 586 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು

ದಕ್ಷಿಣ ಕನ್ನಡ ಉಪ ವಿಭಾಗ-2, ಮಂಗಳೂರು

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ-2**

**ಬೆಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು-2 ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್ಆರ್-4/ಎಫ್/2004, ದಿನಾಂಕ: 25ನೇ ಮಾರ್ಚ್ 2004**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ಶ್ರೀಮತಿ ಹೇಮಾವತಿ
2) ಶ್ರೀಮತಿ ವಿಶಾಲಾಕ್ಷಿ
3) ಶ್ರೀಮತಿ ಸುಮತಿ
4) ಶ್ರೀ ರಾಜೇಶ್ ಮೃತ ಶ್ರೀ ಕರಿಯಪ್ಪ ನಾರಾಯಣ ಪೂಜಾರಿಯವರ ಮಕ್ಕಳು ಕೊಲತಮಜಲು ಹೌಸ್, ಸಾಬೂರು ವಿಲೇಜ್ ಪೂಳಲಿ, ಬಂಟ್ವಾಳ ತಾಲ್ಲೂಕು ದ.ಕ.

1) ಶ್ರೀಮತಿ ರೇವತಿ ರಾಮಚಂದ್ರರವರ ಮಡದಿ ದೇವಗಿರಿ ಕಾಂಪೌಂಡು, ಸಿಲ್ವರ್‌ಗೇಟ್ ಸ್ಟೇಟ್ ಬ್ಯಾಂಕ್ ಬಳಿ, ಮಂಗಳೂರು.
2) ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂಪನಿ ಲಿ., ಬ್ರಿಡ್ಜ್ ರಸ್ತೆ, ಬಲ್ಮಠ, ಮಂಗಳೂರು-575001

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಹೇಮಾವತಿ ಮತ್ತು ಇತರರು ಇವರು ತಮ್ಮ ತಂದೆ ಶ್ರೀ ಕರಿಯಪ್ಪ ನಾರಾಯಣ ಪೂಜಾರಿ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 18.3.2000 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಜಿ.ಆರ್. ಇಂಗಳೆ**

ಪಿ.ಆರ್. 587 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು

ದ.ಕ. ಉಪ ವಿಭಾಗ-2, ಮಂಗಳೂರು

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ-2**

**ಬೆಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು-2 ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್ಆರ್-8/ಎಫ್/2004, ದಿನಾಂಕ: 25ನೇ ಮಾರ್ಚ್ 2004**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ಶ್ರೀ ಬಾಬುಗೌಡ ಮೃತ ಪೂವಣ್ಣಿಗೌಡರವರ ಮಗ
2) ಶ್ರೀಮತಿ ಲಕ್ಷ್ಮಿ ಬಾಬುಗೌಡ ರವರ ಮಡದಿ ಕಕ್ಕೆ ಮಜಲು ಹೌಸ್ ಬಾಳ ವಿಲೇಜ್ ಮತ್ತು ಅಂಚೆ, ಪುತ್ತೂರು ತಾಲ್ಲೂಕು ದಕ್ಷಿಣ ಕನ್ನಡ

1) ಶ್ರೀ ಸುಧಾಕರ ಪೂಜಾರಿ ಶ್ರೀಧರ ಪೂಜಾರಿಯವರ ಮಗ ಕಿಶೋರ ನಿವಾಸ ಕಾಪಿಕಾಡ ಬಿಟ್ಟೆ ಪೋಸ್ಟ್, ಮಂಗಳೂರು, ದಕ್ಷಿಣ ಕನ್ನಡ.

**ಅಧಿಸೂಚನೆ**

ಅರ್ಜಿದಾರರಾದ ಶ್ರೀ ಬಾಬುಗೌಡ ಮತ್ತು ಶ್ರೀಮತಿ ಲಕ್ಷ್ಮಿ ಇವರು ತಮ್ಮ ಮಗನಾದ ಶ್ರೀ ಬಾಲಕೃಷ್ಣ ಗೌಡ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 13.10.2002 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ

ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಜಿ.ಆರ್. ಇಂಗಳೆ
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ದ.ಕ. ಉಪ ವಿಭಾಗ-2, ಮಂಗಳೂರು

ಪಿ.ಆರ್. 588

## ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ

### ಅಧಿಸೂಚನೆ ಸಂಖ್ಯೆ: ಎಫ್ಒಸಿ-ಸಿಒಎನ್-ಸಿ.ಆರ್. 28/2003-04

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಭದ್ರಾವತಿ ವಲಯದ ಗಂಗೂರು ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 71(ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | ಕ್ಯಾಂಟರ್ ವ್ಯಾನು ನಂ. ಕೆಎ-11-3467 | ವಲಯ ಅರಣ್ಯಾಧಿಕಾರಿ, ಭದ್ರಾವತಿ ಇವರ ಮೊಕದ್ದಮೆ ಸಂ: 279/03-04, ದಿ: 30.3.04 | 110812506 | 110820066 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೂ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕುಬಾಧ್ಯತೆಗಳನ್ನು ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71 (ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್. 589

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ-2 ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು-29

### ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-15/2003, ದಿನಾಂಕ: 16ನೇ ಏಪ್ರಿಲ್ 2004

**ಅರ್ಜಿದಾರರು:**

1. ಶ್ರೀಮತಿ ಅಂಜನಮ್ಮ
ಕೋಂ ಲೇಟ್ ಶ್ರೀರಾಮಪ್ಪ,
208: ನಂ. 840, 8ನೇ ಮೇನ್,
ಯಮುನಾ ನದಿ ರಸ್ತೆ, ಶ್ರೀನಗರ, ಬೆಂಗಳೂರು-27
2. ಶ್ರೀಮತಿ ಲಕ್ಷ್ಮಿದೇವಮ್ಮ ಕೋಂ ಲೇಟ್
ಶ್ರೀರಾಮಪ್ಪ ಮತ್ತು ಇತರೆ 4 ಜನ ಅಪ್ಪಿರೆಡ್ಡಿ ಹಳ್ಳಿ,
ಸೋಮನಹಳ್ಳಿ, ಗುಡಿಬಂಡೆ ತಾ: ಕೋಲಾರ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:**

1. ದಿ ಡಿವಿಜನಲ್ ಮ್ಯಾನೇಜರ್,
ಕೆ.ಎಸ್.ಆರ್.ಟಿ.ಸಿ. (ಕೋಲಾರ ವಿಭಾಗ)
ವಲಯ ಕಛೇರಿ, ಕೆ.ಹೆಚ್. ರಸ್ತೆ,
ಬೆಂಗಳೂರು-27

### ಪ್ರಕಟಣೆ

ಅರ್ಜಿದಾರರಾದ 1. ಅಂಜನಮ್ಮ 2. ಲಕ್ಷ್ಮಿದೇವಮ್ಮ ಮತ್ತು ಇತರೆ 4 ಜನ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ರಾಮಪ್ಪ ಇವರು ಪ್ರತಿವಾದಿ- ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬೆಂಗಳೂರು ಉಪ ವಿಭಾಗ-2, ಬೆಂಗಳೂರು

ಪಿ.ಆರ್. 590

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ-ವಿಭಾಗ-2**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು-29**
**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-59:2003, ದಿನಾಂಕ: 16ನೇ ಏಪ್ರಿಲ್ 2004**

**ಅರ್ಜಿದಾರರು:** ವಿರುದ್ಧ

1. ಶ್ರೀಮತಿ ಬಿಬೀ ಜಾನ್ ಕೋಂ ಲೇಟ್ ಅಬ್ದುಲ್ ಜಲೀಲ್
2. ಕು: ಶಬನಾ ಡಾ: ಆಫ್ ಲೇಟ್ ಅಬ್ದುಲ್ ಜಲೀಲ್, ಸಿಎಸ್‌ಐ ಹಾಸ್ಪಿಟಲ್ ಉಪಸಂದ್ರ, ಚಿಕ್ಕಬಳ್ಳಾಪುರ ಟೌನ್

**ಪ್ರತಿವಾದಿಗಳು:**

1. ಶ್ರೀಮತಿ ನಾಸೀರಿನ್ ಬಾನು ಕೋಂ ಲೇಟ್ ಪಿ. ಶಕೀರ್, ಶಕೀರ ವರ್ಕ್‌ಶಾಪ್, ಬಿ.ಬಿ. ರಸ್ತೆ, ಚಿಕ್ಕಬಳ್ಳಾಪುರ ಟೌನ್.
2. ಡಿವಿಜನಲ್ ಮ್ಯಾನೇಜರ್, ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಯುನಿಟಿ ಬಿಲ್ಡಿಂಗ್, ಮಿಶನ್ ರಸ್ತೆ, ಬೆಂಗಳೂರು-27.

**ಪ್ರಕಟಣೆ**

ಅರ್ಜಿದಾರರಾದ 1. ಶ್ರೀಮತಿ ಬಿಬೀ ಜಾನ್ 2. ಕು. ಶಬನಾ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಇಕ್ಬಾಲ್ ಪಾಶಾ ಇವರು ಪ್ರತಿವಾದಿ-1 ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 591 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬೆಂಗಳೂರು ಉಪ-ವಿಭಾಗ-2, ಬೆಂಗಳೂರು

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ-ವಿಭಾಗ-2**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು-29**
**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-88:2002, ದಿನಾಂಕ: 16ನೇ ಏಪ್ರಿಲ್ 2004**

**ಅರ್ಜಿದಾರರು:** ವಿರುದ್ಧ

1. ಶ್ರೀ ರಂಗಸ್ವಾಮಿ ಬಿನ್ ರಂಗಯ್ಯ
2. ಶ್ರೀಮತಿ ಶಾಂತಮ್ಮ ಕೋಂ ರಂಗಸ್ವಾಮಿ
3. ಆರ್. ಗಿರೀಶ್ ಬಿನ್ ರಂಗಸ್ವಾಮಿ
   ನಂ. 163, ನಂ. 21, ಟಿ.ಆರ್. ಶಾಮಣ್ಣ ನಗರ, 10ನೇ ಮೇನ್, ಶ್ರೀನಗರ, ಬೆಂಗಳೂರು-50.

**ಪ್ರತಿವಾದಿಗಳು:**

1. ಶ್ರೀ ವಿನಯಕುಮಾರ್ ಬಿನ್ ಶ್ರೀನಿವಾಸಲು ನಂ. 19:ಡಿ, 13-ಎ ಮೇನ್, ಮಾರುತಿ ಸರ್ಕಲ್, ಹನುಮಂತನಗರ, ಬೆಂಗಳೂರು-19.
2. ದಿ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ನಂ. 221, ಐಎಂಎಲ್ ಬಿಲ್ಡಿಂಗ್ಸ್, ಕಬ್ಬನ್‌ಪೇಟೆ ರಸ್ತೆ, ಎನ್.ಆರ್. ಸ್ಕ್ವಾಯರ್, ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀ ರಂಗಸ್ವಾಮಿ ಮತ್ತು ಇತರೆ 2 ಜನ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಆರ್ ಧರ್ಮೇಶ್ ಇವರು ಪ್ರತಿವಾದಿ ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 592 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬೆಂಗಳೂರು ಉಪ-ವಿಭಾಗ-2, ಬೆಂಗಳೂರು

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-11:2004**

| ಅರ್ಜಿದಾರರು: | ವಿರುದ್ಧ | ಪ್ರತಿವಾದಿಗಳು: |
|---|---|---|
| 1. ಶ್ರೀ ಎಂ. ಸೌಂಧರಪೌಂಡಿ ಬಿನ್ ಲೇಟ್ ಮಹಾಲಿಂಗಂ ನಾದರ್ 47 ವರ್ಷ<br>2. ಶ್ರೀಮತಿ ಎಸ್. ಶಾಂತ ಕುಮಾರಿ ಕೋಂ ಎಂ ಸೌಂಧರಪೌಂಡಿ, 45 ವರ್ಷ ನಂ. 7:47, ಮುನಿಯಪ್ಪನಗರ, 3ನೇ ಸ್ಟ್ರೀಟ್, ನೇರಕುಂದರಂ, ಚೆನ್ನೈ-107, ತಮಿಳುನಾಡು | | 1. ಶ್ರೀ ಕೆ. ಅಣ್ಣಾಮಲೈ ಮೆ: ದಿವ್ಯ ಪ್ರಾವಿಜನ್ ಸ್ಟೋರ್ಸ್, ಗಜೇಂದ್ರನಗರ ಮುಖ್ಯ ರಸ್ತೆ, ಡಾ: ಶಾಮಣ್ಣ ಸ್ಟ್ರೀಟ್, ಹಳೆ ಬೈಯಪ್ಪನಹಳ್ಳಿ, ಎಂ.ಎಸ್. ನಗರ ಅಂಚೆ, ಬೆಂಗಳೂರು-33.<br>2. ಮೆ: ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿಮಿಟೆಡ್, ನಂ. 41:2ಎ, 1ನೇ ಮಹಡಿ, ನಿತ್ಯನಂದನಗರ, ನಾಯಾಂಡಹಳ್ಳಿ, ಮೈಸೂರು ರಸ್ತೆ, ಬೆಂಗಳೂರು-39. |

**ಅಧಿಸೂಚನೆ**

ಅರ್ಜಿದಾರರಾದ ಶ್ರೀ ಎಂ. ಸೌಂಧರಪೌಂಡಿ ಅವರು ತಮ್ಮ ಗಂಡ:ಮಗನಾದ ಶ್ರೀ ಎಸ್. ಜೈಸನ್ ಅವರು 1ನೇ ಪ್ರತಿವಾದಿ ಶ್ರೀ ಕೆ. ಅಣ್ಣಾಮಲೈ ರವರ ಬಳಿ ಚಾಲಕ:ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 13.2.2004 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 13.4.2004 ರಂದು ನೀಡಲಾಗಿದೆ.

**ಬಿ. ಚಿಕ್ಕಣ್ಣ**

ಪಿ.ಆರ್. 593 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-12:2004**

| ಅರ್ಜಿದಾರರು: | ವಿರುದ್ಧ | ಪ್ರತಿವಾದಿಗಳು: |
|---|---|---|
| ಪ್ರಮೀಳ ಕೋಂ ಲೇಟ್ ಎನ್. ನಾಗೇಂದ್ರಪ್ಪ ಮನೆ ನಂ. 1, 2ನೇ ವಿಭಾಗ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ವಸತಿಗೃಹ, ಚಿಂತಾಮಣಿ | | ವಿಭಾಗೀಯ ನಿಯಂತ್ರಣಾಧಿಕಾರಿಗಳು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಕೋಲಾರ ವಿಭಾಗ, ಕೋಲಾರ. |

**ಅಧಿಸೂಚನೆ**

ಅರ್ಜಿದಾರರಾದ ಪ್ರಮೀಳ ಕೋಂ ಲೇಟ್ ಎನ್ ನಾಗೇಂದ್ರಪ್ಪ ಅವರು ತಮ್ಮ ಗಂಡ ಶ್ರೀ ಎನ್ ನಾಗೇಂದ್ರಪ್ಪ ಅವರು 1ನೇ ಪ್ರತಿವಾದಿ ವಿಭಾಗೀಯ ನಿಯಂತ್ರಣಾಧಿಕಾರಿಗಳರವರ ಬಳಿ ಮುಖ್ಯ ಕುಶಲಕರ್ಮಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 15.2.2004 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 13.4.2004 ರಂದು ನೀಡಲಾಗಿದೆ.

**ಬಿ. ಚಿಕ್ಕಣ್ಣ**

ಪಿ.ಆರ್. 594 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.